KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೩ | ಬೆಂಗಳೂರು, ಗುರುವಾರ ಜುಲೈ ೩, ೨೦೦೮ (ಆಷಾಢ ೧೨, ಶಕ ವರ್ಷ ೧೯೩೦) | ಸಂಚಿಕೆ ೨೭ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ಶ್ರೀ ಆರ್.ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಖಾನಾಪುರ, ಬೆಳಗಾಂ ಜಿಲ್ಲೆ (ಪ್ರಸ್ತುತ ವಯೋ ನಿವೃತ್ತರು) ಇವರ ವಿರುದ್ಧದ ಆಪಾದನೆಗೆ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಬೆಳಗಾಂ ಇವರ ಪ್ರಸ್ತಾವನೆ ಸಂ: ಕಂಶಾ: ಸಿಬ್ಬಂದಿ–1: ವಿವ–132/ 05–06, ದಿನಾಂಕ: 06–3–2006.
2) ಸರ್ಕಾರದ ಕಾರಣ ಕೇಳುವ ನೋಟೀಸ್ ಸಂ: ಆರ್‌ಡಿ 29 ಎಡಿಇ 2006, ದಿನಾಂಕ: 27–04–2006.
3) ಶ್ರೀ ಆರ್.ಜಿ.ಪಾಲ್ಕರ್, ನಿವೃತ್ತ ತಹಶೀಲ್ದಾರ್ ಇವರು ನೀಡಿರುವ ರಕ್ಷಣಾ ಹೇಳಿಕೆ ದಿನಾಂಕ: 03–7–2006.

**ಪ್ರಸ್ತಾವನೆ:**

ಶ್ರೀ ಆರ್.ಜಿ. ಪಾಲ್ಕರ್ (ವಯೋ ನಿವೃತ್ತರು) ಹಿಂದಿನ ತಹಶೀಲ್ದಾರ್, ಖಾನಾಪುರ, ಬೆಳಗಾವಿ ಜಿಲ್ಲೆ ಇಲ್ಲಿ 2005–06ನೇ ಸಾಲಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ನಾಟಕ ಭೂ ಕಂದಾಯ ಅಧಿನಿಯಮಗಳು 1964ರನ್ವಯ ನಿಗದಿತ ಕಾಲಾವಧಿಯಲ್ಲಿ ಕ್ರಮ ಕೈಗೊಳ್ಳದೆ, ಸರ್ಕಾರಿ ದಾಖಲೆಗಳನ್ನು ತಿದ್ದುವ ಅಪರಾಧಿತ ಕೃತ್ಯದಲ್ಲಿ ತೊಡಗಿರುವ ದುರ್ನಡತೆಯ ಆಪಾದನೆಗೆ ಸಂಬಂಧಿಸಿದಂತೆ, ಅವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮಗಳನ್ವಯ ಶಿಸ್ತು ಕ್ರಮ ಜರುಗಿಸುವಂತೆ ಕರಡು ದೋಷಾರೋಪಣಾ ಪಟ್ಟಿಯನ್ನು ಅನುಬಂಧ 1 ರಿಂದ 4ರವರೆಗೆ ಸರ್ಕಾರಕ್ಕೆ ಮೇಲೆ ಓದಲಾದ (1)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬೆಳಗಾಂ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ, ಬೆಳಗಾಂ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಮೇಲೆ ಓದಲಾದ ಕ್ರ.ಸಂ. (2)ರ ದಿನಾಂಕ: 27–04–2006 ರಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಡಿಯಲ್ಲಿ ದೋಷಾರೋಪಣೆಗಳನ್ನು ಅನುಬಂಧ 1 ರಿಂದ 4 ರವರೆಗೆ ಕಾರಣ ಕೇಳುವ ನೋಟೀಸಿನೊಂದಿಗೆ ಶ್ರೀ ಆರ್.ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಖಾನಾಪುರ, ಬೆಳಗಾಂ ಜಿಲ್ಲೆ ಇವರಿಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಸೂಚಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ (3)ರಲ್ಲಿ ಶ್ರೀ ಆರ್.ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಖಾನಾಪುರ, ಇವರು ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ ತಮ್ಮನ್ನು ಆರೋಪಗಳಿಂದ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಸದರಿ ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಲಾಗಿದ್ದು, ಆಪಾದನೆಯನ್ನು ಸಮರ್ಥಿಸುವಂತಹ ಅಂಶಗಳು ಹಾಗೂ ದಾಖಲಾತಿಗಳನ್ನು ಒದಗಿಸಿರುವುದಿಲ್ಲವಾದ್ದರಿಂದ ಸರ್ಕಾರವು ಈ ಪ್ರಕರಣದಲ್ಲಿ ಸತ್ಯಾಸತ್ಯತೆಯನ್ನು ತಿಳಿಯಲು ಇಲಾಖೆ ವಿಚಾರಣೆಯನ್ನು ಜರುಗಿಸಲು ನಿರ್ಧರಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 29 ಎಡಿಇ 2006, ಬೆಂಗಳೂರು, ದಿನಾಂಕ: 29ನೇ ಏಪ್ರಿಲ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ಆರ್.ಜಿ.ಪಾಲ್ಕರ್, ಹಿಂದಿನ ತಹಶೀಲ್ದಾರ್, ಖಾನಾಪುರ (ವಯೋ ನಿವೃತ್ತರು), ಬೆಳಗಾಂ ಜಿಲ್ಲೆ, ಇವರ ವಿರುದ್ಧ ಇರುವ ಆಪಾದನೆಯ ಬಗ್ಗೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಎ.ಎ. ಹುಲಗೇರಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಳಗಾಂ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಳಗಾಂ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ದಿನಾಂಕ: 23–8–2005ರ ಸರ್ಕಾರಿ ಆದೇಶ ಸಂ: ಸಿಆಸುಇ 16 ಸೇಇವಿ 2005ರನ್ವಯ ರೂ.6,000/– (ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ರೂ.1,000/– (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬೆಳಗಾಂ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ 3 ತಿಂಗಳೊಳಗಾಗಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.734

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಕೆ. ಸದಾನಂದಪ್ಪ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು (ಪ್ರಸ್ತುತ ತಹಶೀಲ್ದಾರ್, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ) ಮತ್ತು ಶ್ರೀ ಶ್ರೀರಾಮರೆಡ್ಡಿ, ರಾಜಸ್ವ ನಿರೀಕ್ಷಕರು, ಸಾರಕ್ಕಿ ವೃತ್ತ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರುಗಳ ವಿರುದ್ಧದ ಆಪಾದನೆಗೆ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪ್ರಸ್ತಾವನೆ ಸಂ: ಸಿಸಿಎ(2)ಸಿಆರ್:121/ 2005–06, ದಿನಾಂಕ: 01–08–2006 ಮತ್ತು 19–01–2007 (ಪುಟ 38 ಮತ್ತು 48).
2) ಸರ್ಕಾರದ ಕಾರಣ ಕೇಳುವ ನೋಟೀಸು ಸಂ: ಆರ್‌ಡಿ 80 ಎಡಿಇ 2006, ದಿನಾಂಕ: 04–06–2007 (ಪುಟ 66 ಮತ್ತು 61).
3) ಶ್ರೀ ಸದಾನಂದಪ್ಪ ಇವರ ರಕ್ಷಣಾ ಹೇಳಿಕೆ ದಿನಾಂಕ: 16–07–2007. (ಪುಟ 90 ರಿಂದ 80).

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:01–08–2006 ಮತ್ತು 19–01–2007ರ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪ್ರಸ್ತಾವನೆಯಲ್ಲಿ ಶ್ರೀ ಕೆ. ಸದಾನಂದಪ್ಪ, ಹಿಂದಿನ ವಿಶೇಷ ತಹಶೀಲ್ದಾರ್,

ಬೆಂಗಳೂರು ದಕ್ಷಿಣ ತಾಲ್ಲೂಕು, (ಪ್ರಸ್ತುತ ತಹಶೀಲ್ದಾರ್, ಆನೇಕಲ್ ತಾಲ್ಲೂಕು) ಮತ್ತು ಶ್ರೀ ಶ್ರೀರಾಮರೆಡ್ಡಿ, ರಾಜಸ್ವ ನಿರೀಕ್ಷಕರು, ಸಾರಕ್ಕಿ ವೃತ್ತ, ಬೆಂಗಳೂರು ದಕ್ಷಿಣ ತಾಲ್ಲೂಕು ಇಲ್ಲಿ 2003–2006ನೇ ಸಾಲಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಬೆಂಗಳೂರು ದಕ್ಷಿಣ ತಾಲ್ಲೂಕು ಉತ್ತರಹಳ್ಳಿ ಹೋಬಳಿ, ಚುಂಚಘಟ್ಟ ಗ್ರಾಮದ ಸರ್ವೆ ಸಂ: 73/1ರಲ್ಲಿ ಒಟ್ಟು 5–20 ಎಕರೆ ಜಮೀನಿನಲ್ಲಿ ಖಾತೆದಾರರಾದ ಶ್ರೀ ಹೆಚ್.ಎ. ಸುಬ್ಬರಾವ್ ಬಿನ್ ಅನಂತಪ್ಪ ಇವರ ಹೆಸರಿಗೆ ಹೆಚ್‌ಒಎ (ಎಸರ) 351/1968–69 ರನ್ವಯ 2–12 ಎಕರೆ–ಗುಂಟೆ ಶಾನುಭೋಗಿ ಇನಾಂ ಜಮೀನು ಮಂಜೂರಾಗಿದ್ದು, ಇದರಲ್ಲಿ 1–30 ಎಕರೆ–ಗುಂಟೆ ವಿಸ್ತೀರ್ಣ ಗ್ರಾಮ ಪಂಚಾಯಿತಿಗೆ ಭೂ ಸ್ವಾಧೀನವಾಗಿದ್ದು, ಅದಕ್ಕೆ ಪರಿಹಾರವಾಗಿ ರೂ.1,055.63 ಅನ್ನು ಶ್ರೀ ಸುಬ್ಬಾರಾವ್‌ರವರಿಗೆ ಪಾವತಿಯಾಗಿರುತ್ತದೆ. ಉಳಿದ 1–18 ಎಕರೆ–ಗುಂಟೆ ಜಮೀನು ಕೂಡ ಬೇರೆಯವರಿಗೆ ಕ್ರಯವಾಗಿರುತ್ತದೆ. ಆದ್ದರಿಂದ, 2002–03ನೇ ಗಣಕೀಕೃತ ಆರ್‌ಟಿಸಿಯಲ್ಲಿ ಸರ್ವೆ ನಂ: 73/1 ರ ಜಮೀನಿಗೆ ಆರ್‌ಟಿಸಿ ಕಲಂ 9ರಲ್ಲಿ ಯಾವುದೇ ಹಕ್ಕುದಾರರು ಇರುವುದಿಲ್ಲವೆಂದು ದೃಢೀಕರಿಸಿದೆ.

ಈ ಸಂದರ್ಭದಲ್ಲಿ ಶ್ರೀ ರಾಘವೇಂದ್ರ ಇವರು ಶ್ರೀ ಸುಬ್ಬಾರಾವ್ ಇವರು ವಾರಸುದಾರರು ಎಂದು ವಾರಸು ಖಾತೆ ಮಾಡಲು ಅರ್ಜಿ ಸಲ್ಲಿಸಿದ ಹಿನ್ನಲೆಯಲ್ಲಿ, ತಹಶೀಲ್ದಾರರು, ಈ ಜಮೀನಿನ ಹಿತಾಸಕ್ತಿ ಇರುವ ಯಾರಿಗೂ ನೋಟೀಸ್ ನೀಡದೆ ಸ್ಥಳ ಪರಿಶೀಲನೆ ಮಾಡದೆ, ಆರ್‌ಆರ್‌ಟಿ:ಸಿಆರ್:521/2003–04, ದಿನಾಂಕ: 10–11–2004ರ ಅಧಿಕೃತ ಜ್ಞಾಪನದಲ್ಲಿ ದಿನಾಂಕ: 18–01–1999ರಂದು ಮೃತಪಟ್ಟ ಹೆಚ್.ಎ. ಸುಬ್ಬಾರಾವ್ ಹೆಸರನ್ನು ಗಣಕೀಕೃತ ಆರ್‌ಟಿಸಿ ಕಲಂ 9 ಹಾಗೂ 12(2)ರಲ್ಲಿ ಮುಂದುವರೆಸಲು ಆದೇಶ ಮಾಡುವ ಮೂಲಕ ಶ್ರೀ ಹೆಚ್.ಎ.ಸುಬ್ಬರಾವ್ ರವರ ಹೆಸರಿಗೆ ಹಕ್ಕು ದಾಖಲೆ ಸೃಷ್ಟಿಸಲು ಆದೇಶ ನೀಡಿ ತಮ್ಮ ಅಧಿಕಾರ ದುರುಪಯೋಗ ಪಡಿಸಿಕೊಂಡ ಆಪಾದನೆಗೆ ಸರ್ಕಾರವು ಮೇಲೆ (2)ರಲ್ಲಿ ಓದಲಾದ ದಿನಾಂಕ:04–06–2007ರಲ್ಲಿ ಶ್ರೀ ಕೆ.ಸದಾನಂದಪ್ಪ, ವಿಶೇಷ ತಹಶೀಲ್ದಾರ್ ಮತ್ತು ಶ್ರೀ ಶ್ರೀರಾಮರೆಡ್ಡಿ, ರಾಜಸ್ವ ನಿರೀಕ್ಷಕರು, ಬೆಂಗಳೂರು ದಕ್ಷಿಣ ತಾಲ್ಲೂಕು ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಯಿತು. ಸದರಿ ನೋಟೀಸಿಗೆ ಆಪಾದಿತ (1) ಆದ ಶ್ರೀ ಕೆ. ಸದಾನಂದಪ್ಪ, ವಿಶೇಷ ತಹಶೀಲ್ದಾರ್ ಇವರು ರಕ್ಷಣಾ ಹೇಳಿಕೆ ನೀಡಿ ಆಪಾದನೆಯಿಂದ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ. ಆದರೆ ಆಪಾದಿತ (2)ಆದ ಶ್ರೀ ಶ್ರೀರಾಮರೆಡ್ಡಿ, ರಾಜಸ್ವ ನಿರೀಕ್ಷಕರು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ದೋಷಾರೋಪಣೆಯಲ್ಲಿ ವಿವರಿಸಿರುವ ಆಪಾದನೆಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಸದರಿ ಪ್ರಕರಣವನ್ನು ಇಲಾಖಾ ವಿಚಾರಣೆಗೆ ವಹಿಸಲು ನಿರ್ಧರಿಸಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 80 ಎಡಿಇ 2006, ಬೆಂಗಳೂರು, ದಿನಾಂಕ: 29ನೇ ಏಪ್ರಿಲ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ, ಶ್ರೀ ಕೆ.ಸದಾನಂದಪ್ಪ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು (ಪ್ರಸ್ತುತ ತಹಶೀಲ್ದಾರ್, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ) ಮತ್ತು ಶ್ರೀ ಶ್ರೀರಾಮರೆಡ್ಡಿ, ರಾಜಸ್ವ ನಿರೀಕ್ಷಕರು, ಸಾರಕ್ಕಿ ವೃತ್ತ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರ ವಿರುದ್ಧದ ಆಪಾದನೆಗೆ ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರಡಿಯಲ್ಲಿ ಶ್ರೀ ಶೋಸಲೆ ಇಂಧುಧರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ:8, 15ನೇ ಕ್ರಾಸ್, 5ನೇ ಫೇಸ್, ಜೆ.ಪಿ.ನಗರ, ಬೆಂಗಳೂರು–560 078 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಬೆಂಗಳೂರು ನಗರ ಜಿಲ್ಲಾಧಿಕಾರಿಯವರ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ದಿನಾಂಕ: 23–8–2005ರ ಸರ್ಕಾರಿ ಆದೇಶ ಸಂ: ಸಿಆಸುಇ 16 ಸೇಇವಿ 2005ರನ್ವಯ ರೂ.6,000/– (ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ರೂ.1,000/– (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.735

**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಸಿ.ಎಂ. ಹಿರೇಮಠ, ಹಿಂದಿನ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗದಗ್, ಪ್ರಸ್ತುತ ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಇವರ ವಿರುದ್ಧದ ಶಿಸ್ತು ಕ್ರಮದ ಬಗ್ಗೆ.

**ಓದಲಾಗಿದೆ:**
1) ಗದಗ್ ಜಿಲ್ಲಾಧಿಕಾರಿಯವರ ಪತ್ರದ ಸಂ: ಸಿಬ್ಬಂದಿ–1/ ವಹಿ–82/2006–07, ದಿನಾಂಕ: 19–07–2007.
2) ಕಾರಣ ಕೇಳುವ ನೋಟೀಸ್ ಸಂ: ಆರ್‌ಡಿ 07 ಎಡಿಇ 2007 (ಭಾಗ) ದಿನಾಂಕ: 19–09–2007.
3) ಶ್ರೀ ಸಿ.ಎಂ.ಹಿರೇಮಠ, ಇವರ ಲಿಖಿತ ಸಮಜಾಯಿಷಿ ದಿನಾಂಕ: 15–11–2007.

**ಪ್ರಸ್ತಾವನೆ:**

ಶ್ರೀ ಸಿ.ಎಂ. ಹಿರೇಮಠ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗದಗ್ ಇವರು ಮಾನ್ಯ ಮುಖ್ಯ ಮಂತ್ರಿಗಳ ಗ್ರಾಮ ವಾಸ್ತವ್ಯದ ಬಗ್ಗೆ ಅವಹೇಳನಕಾರಿಯಾಗಿ ಸಾರ್ವಜನಿಕರ ಎದುರಿಗೆ ಮಾತನಾಡಿ ಸರ್ಕಾರಿ ಅಧಿಕಾರಿ/ ನೌಕರರಿಗೆ ಸಲ್ಲದ ರೀತಿಯಲ್ಲಿ ನಡೆದುಕೊಂಡಿರುವುದರಿಂದ ಹಾಗೂ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ನ್ನು ಉಲ್ಲಂಘಿಸಿದ್ದರಿಂದ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಗದಗ್ ಇವರು ಕೋರಿದ್ದರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ, ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರಡಿಯಲ್ಲಿ ಆರೋಪ ಪಟ್ಟಿಗಳನ್ನು ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪಿತ ಅಧಿಕಾರಿಗೆ ಜಾರಿ ಮಾಡಿ, ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ: 19–9–2007ರ ನೋಟೀಸ್ ಮೂಲಕ ಶ್ರೀ ಸಿ.ಎಂ.ಹಿರೇಮಠ, ಇವರಿಗೆ ನೀಡಲಾಗಿದೆ. ಕ್ರ.ಸಂ.(3)ರಲ್ಲಿ ಓದಲಾದ ದಿನಾಂಕ: 15–11–2007ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಸಿ.ಎಂ.ಹಿರೇಮಠ, ಇವರು ತಮ್ಮ ವಿರುದ್ಧದ ಆರೋಪಗಳನ್ನು ಸ್ಪಷ್ಟವಾಗಿ ನಿರಾಕರಿಸಿರುತ್ತಾರೆ.

ಈ ಹಿನ್ನಲೆಯಲ್ಲಿ ಆಪಾದಿತ ಅಧಿಕಾರಿ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 07 ಎಡಿಇ 2007(ಭಾಗ), ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ, ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(2)ರಡಿಯಲ್ಲಿ ಶ್ರೀ ಸತ್ಯಮೂರ್ತಿ ಹೊಳ್ಳ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ. 2264, ಹೆಚ್.ಎ.ಎಲ್, 3ನೇ ಹಂತ, ಬಿ.ಡಿ.ಎ ಲೇಔಟ್, 2ನೇ ಕ್ರಾಸ್, 4ನೇ ಮೇಯಿನ್, ಏರ್‌ಪೋರ್ಟ್ ಹತ್ತಿರ, ವಿಮಾನಪುರ ಅಂಚೆ, ಬೆಂಗಳೂರು – 560017 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಗದಗ್ ಜಿಲ್ಲಾಧಿಕಾರಿಯವರ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ದಿನಾಂಕ: 23–8–2005ರ ಸರ್ಕಾರಿ ಆದೇಶ ಸಂ: ಸಿಆಸುಇ 16 ಸೇಇವಿ 2005ರನ್ವಯ ರೂ.6,000/– (ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ರೂ.1,000/– (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು, ಗದಗ್ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.494

**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಎಸ್.ಎಂ. ಹಿರೇಮಠ, ಹಿಂದಿನ ತಹಶೀಲ್ದಾರ್, ಸವದತ್ತಿ ತಾಲ್ಲೂಕು, ಬೆಳಗಾಂ ಜಿಲ್ಲೆ (ಪ್ರಸ್ತುತ ನಿವೃತ್ತರು) ಹಾಗೂ ಶ್ರೀ ಪಿ.ಐ. ಗಣಾಚಾರಿ, ಹಿಂದಿನ ಉಪ ತಹಶೀಲ್ದಾರ್, ಸವದತ್ತಿ, ಬೆಳಗಾಂ ಜಿಲ್ಲೆ ಇವರು ಲೋಕಾಯುಕ್ತ ಜಾಲಕ್ಕೆ ಸಿಲುಕಿರುವ ಸಂಬಂಧ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಸಕ್ರಮಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 15 ಎಡಿಇ 1996, ದಿನಾಂಕ:27.2.1996.
2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 15 ಎಡಿಇ 1996, ದಿನಾಂಕ:5.7.1996.
3. ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 15 ಎಡಿಇ 1996, ದಿನಾಂಕ:15.10.1996
4. ಶ್ರೀ ಎಸ್.ಎಂ.ಹಿರೇಮಠ್ ಇವರ ಮನವಿ ದಿನಾಂಕ:21-2-2007.
5. ಜಿಲ್ಲಾಧಿಕಾರಿಗಳು, ಬೆಳಗಾಂ ಇವರ ಪತ್ರ ಸಂಖ್ಯೆ: ಕಂಶಾ: ಸಿಬ್ಬಂದಿ 1: ವಿವ: 261/ 06-07, ದಿನಾಂಕ:26-2-2007.
6. ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ ಐಎನ್‌ವಿ(ಜಿ)/ ಎಲ್-5/ ಸಿಆರ್-3/96/ ಬಿಜಿಎಂ, ದಿನಾಂಕ:17-10-2007.

**ಪ್ರಸ್ತಾವನೆ:**

ಶ್ರೀ ಎಸ್.ಎಂ. ಹಿರೇಮಠ, ಹಿಂದಿನ ತಹಶೀಲ್ದಾರ್, ಸೌದತ್ತಿ ತಾಲ್ಲೂಕು, ಬೆಳಗಾಂ ಜಿಲ್ಲೆ (ಪ್ರಸ್ತುತ ನಿವೃತ್ತರು) ಮತ್ತು ಶ್ರೀ ಪಿ.ಐ. ಗಣಾಚಾರಿ, ಹಿಂದಿನ ಉಪ ತಹಶೀಲ್ದಾರ್, ಸವದತ್ತಿ ತಾಲ್ಲೂಕು ಕಛೇರಿ, (ಪ್ರಸ್ತುತ ಉಪತಹಶೀಲ್ದಾರ್, ನಾಡಕಛೇರಿ, ನೇಸರ್ಗಿ, ತಾಲ್ಲೂಕು ಬೈಲಹೊಂಗಲ) ಬೆಳಗಾಂ ಜಿಲ್ಲೆ ಇವರುಗಳು ಸವದತ್ತಿ ತಾಲ್ಲೂಕಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಅನುಕೂಲಕರ ಕೆಲಸಮಾಡಿಕೊಡುವುದುದಾಗಿ ಶ್ರೀ ಮಲ್ಲಪ್ಪ ಎಂಬುವವರಿಂದ ದಿನಾಂಕ: 18-01-1996 ರಂದು ರೂ.5.000ಗಳ ಅಕ್ರಮ ಸಂಭಾವನೆ ಪಡೆಯುತ್ತಿದ್ದಾಗ ಕರ್ನಾಟಕ ಲೋಕಾಯುಕ್ತರು ಬೀಸಿದ ಬಲೆಗೆ ಸಿಲುಕಿರುವುದರಿಂದ ಮೇಲೆ ಓದಲಾದ(1)ರ ದಿನಾಂಕ:27.2.1996ರ ಆದೇಶದಲ್ಲಿ ಇವರುಗಳನ್ನು ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ ಸೇವೆಯಿಂದ ಅಮಾನತ್ತುಗೊಳಿಸಲಾಯಿತು. ನಂತರ ಸರ್ಕಾರವು ಮೇಲೆ(2) ರಲ್ಲಿ ಓದಲಾದ ದಿನಾಂಕ:5.7.1996ರಲ್ಲಿ ಶ್ರೀ ಎಸ್.ಎಂ. ಹಿರೇಮಠ, ತಹಶೀಲ್ದಾರ್ ಇವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಿ ಸೇವೆಗೆ ಪುನರ್‌ಸ್ಥಾಪಿಸಲಾಗಿದೆ. ಹಾಗೂ ಮೇಲೆ(3)ರಲ್ಲಿ ಓದಲಾದ ದಿನಾಂಕ: 15.10.96ರ ಆದೇಶದಲ್ಲಿ ಶ್ರೀ ಪಿ.ಐ.ಗಣಾಚಾರಿ, ಉಪ ತಹಶೀಲ್ದಾರ್, ಇವರನ್ನು ಸಹ ಅಮಾನತ್ತಿನಿಂದ ಬಿಡುಗಡೆಗೊಳಿಸಿ ಸೇವೆಗೆ ಪುನರ್‌ಸ್ಥಾಪಿಸಲಾಗಿದೆ.

ಶ್ರೀ ಎಸ್.ಎಂ. ಹಿರೇಮಠ,ನಿವೃತ್ತ ತಹಶೀಲ್ದಾರ್ ಮತ್ತು ಶ್ರೀ ಪಿ.ಐ. ಗಣಾಚಾರಿ, ಹಿಂದಿನ ಉಪ ತಹಶೀಲ್ದಾರ್, ಸವದತ್ತಿ, ಬೆಳಗಾಂ ಜಿಲ್ಲೆ ಇವರುಗಳ ವಿರುದ್ಧ ಕ್ರಿಮಿನಲ್ ಆಪಾದನೆಗೆ ಸಂಬಂಧಿಸಿದಂತೆ ಪ್ರಿನ್ಸಿಪಲ್ ಸೆಷನ್(ವಿಶೇಷ)ನ್ಯಾಯಾಲಯ, ಬೆಳಗಾಂನಲ್ಲಿನ ವಿಶೇಷ ಪ್ರಕರಣ ಸಂಖ್ಯೆ: 23/97, ದಿನಾಂಕ:29.8.2006ರ ತೀರ್ಪಿನಲ್ಲಿ ಆಪಾದಿತರನ್ನು ಆರೋಪಗಳಿಂದ ಖುಲಾಸೆಗೊಳಿಸಿದೆ. ಸದರಿ ಪ್ರಕರಣದಲ್ಲಿ ಮೇಲ್ಮನವಿ ಸಲ್ಲಿಸಲು ಯೋಗ್ಯ ಪ್ರಕರಣವಲ್ಲವೆಂದು ಪರಿಗಣಿಸಿ ಕ್ರಿಮಿನಲ್

ಮೊಕದ್ದಮೆಯಿಂದ ದೋಷಮುಕ್ತರಾಗಿರುತ್ತಾರೆ. ಹಾಗೂ ಸದರಿ ಪ್ರಕರಣದಲ್ಲಿ ಮಾನ್ಯ ಕರ್ನಾಟಕ ಲೋಕಾಯುಕ್ತರವರಿಂದ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲವೆಂದು ಮೇಲೆ ಓದಲಾದ ಕ್ರ.ಸಂ.(6)ರ ಪತ್ರದಲ್ಲಿ ತಿಳಿಸಲಾಗಿದೆ.

ಶ್ರೀ ಎಸ್.ಎಂ. ಹಿರೇಮಠ, ತಹಶೀಲ್ದಾರ್ (ನಿವೃತ್ತ) ಇವರು ಮೇಲೆ ಓದಲಾದ 21-2-2007ರ ಸರ್ಕಾರಕ್ಕೆ ಸಲ್ಲಿಸಿರುವ ಮನವಿಯಲ್ಲಿ ತಾವು ಕ್ರಿಮಿನಲ್ ಪ್ರಕರಣದಲ್ಲಿ ಆರೋಪ ಮುಕ್ತರಾಗಿರುವುದರಿಂದ, ತಮ್ಮ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಲು ಹಾಗೂ ತಮಗೆ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಜಿಲ್ಲಾಧಿಕಾರಿಗಳು, ಬೆಳಗಾಂ ಇವರು ಮೇಲೆ ಓದಲಾದ ಕ್ರ.ಸಂ.(5)ರ ಪತ್ರದಲ್ಲಿ ಶ್ರೀ ಪಿ.ಐ. ಗಣಾಚಾರಿ, ಶಿರಸ್ತೇದಾರ್ ಇವರು ಮಾನ್ಯ ಲೋಕಾಯುಕ್ತರವರು ಹೂಡಿದ್ದ ಕ್ರಿಮಿನಲ್ ಪ್ರಕರಣ ಸಂಖ್ಯೆ: 23/1997 ರಲ್ಲಿ ದಿನಾಂಕ:29-8-2006ರಂದು ನೀಡಿರುವ ತೀರ್ಪಿನಲ್ಲಿ ಸದರಿಯವರನ್ನು ನಿರ್ದೋಶಿಯಾಗಿ ಆದೇಶಿಸಿದ್ದರಿಂದ, ಶ್ರೀ ಪಿ.ಐ. ಗಣಾಚಾರಿ ಇವರು ಬೈಲಹೊಂಗಲ ತಾಲ್ಲೂಕು ಕಛೇರಿಯಲ್ಲಿ ಶಿರಸ್ತೇದಾರ್ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಅಮಾನತ್ತು ಮಾಡಿದ ಅವಧಿಯನ್ನು ಸಕ್ರಮಗೊಳಿಸಲು ಎಲ್ಲಾ ಹಣಕಾಸು ಸೌಲಭ್ಯಗಳನ್ನು ನೀಡಲು ಆದೇಶಿಸಲು ಕೋರಿರುತ್ತಾರೆ.

ಈ ಹಿನ್ನಲೆಯಲ್ಲಿ, ಶ್ರೀ ಎಸ್.ಎಂ. ಹಿರೇಮಠ, ನಿವೃತ್ತ ತಹಶೀಲ್ದಾರ್, ಮತ್ತು ಶ್ರೀ ಪಿ.ಐ. ಗಣಾಚಾರಿ, ಹಿಂದಿನ ಉಪ ತಹಶೀಲ್ದಾರ್, ಸವದತ್ತಿ, ಬೆಳಗಾಂ ಜಿಲ್ಲೆ (ಪ್ರಸ್ತುತ ಉಪತಹಶೀಲ್ದಾರ್, ನೇಸರ್ಗಿ ನಾಡಕಛೇರಿ, ಬೈಲಹೊಂಗಲ ತಾಲ್ಲೂಕು) ಇವರುಗಳು ಮಾನ್ಯ ಲೋಕಾಯುಕ್ತರವರು ಪ್ರಿನ್ಸಿಪಲ್ ಸೆಷನ್ಸ್ (ವಿಶೇಷ) ನ್ಯಾಯಾಲಯ, ಬೆಳಗಾಂ ಇಲ್ಲಿ ಹೂಡಿದ್ದ ವಿಶೇಷ ಪ್ರಕರಣ ಸಂಖ್ಯೆ: 23/1997ರ ದಿನಾಂಕ:29-8-2006 ಆದೇಶದಲ್ಲಿ ಕ್ರಿಮಿನಲ್ ಪ್ರಕರಣದಿಂದ ಖುಲಾಸೆಗೊಂಡಿರುವುದರಿಂದ ಈ ಅಧಿಕಾರಿ/ ನೌಕರರ ವಿರುದ್ಧ ಅಮಾನತ್ತಿನ ಕಳೆದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 100(1)(ಬಿ)ರನ್ವಯ ಕರ್ತವ್ಯದ ಅವಧಿಯೆಂದು ಪರಿಗಣಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶಸಂಖ್ಯೆ: ಆರ್‌ಡಿ 4 ಎಡಿಇ 2007 ಬೆಂಗಳೂರು, ದಿನಾಂಕ:10ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಎಸ್.ಎಂ. ಹಿರೇಮಠ, ಹಿಂದಿನ ತಹಶೀಲ್ದಾರ್, ಸವದತ್ತಿ ತಾಲ್ಲೂಕು, ಬೆಳಗಾಂ ಜಿಲ್ಲೆ (ಪ್ರಸ್ತುತ ನಿವೃತ್ತ ತಹಶೀಲ್ದಾರ್,) ಇವರು ದಿನಾಂಕ: 13.03.1993 ರಿಂದ 08.07.1996 ರವರೆಗೆ ಹಾಗು ಶ್ರೀ ಪಿ.ಐ. ಗಣಾಚಾರಿ, ಹಿಂದಿನ ಉಪ ತಹಶೀಲ್ದಾರ್, ಸವದತ್ತಿ, ಬೆಳಗಾಂ ಜಿಲ್ಲೆ ಪ್ರಸ್ತುತ ಉಪ ತಹಶೀಲ್ದಾರ್, ನಾಡಕಚೇರಿ, ನೇಸರಗಿ, ಬೈಲಹೊಂಗಲ ತಾಲ್ಲೂಕು, ಬೆಳಗಾಂ ಜಿಲ್ಲೆ ಇವರು ದಿನಾಂಕ:14.3.1996 ರಿಂದ 13.11.1996ರ ಅವಧಿಯವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 100(1)(ಬಿ)ರನ್ವಯ ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.171

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ:** ಓಕಳಿಪುರಂನಲ್ಲಿರುವ ರೇಷ್ಮೆ ಇಲಾಖೆಯ ಖಾಲಿ ನಿವೇಶನದಲ್ಲಿ 200 X 100 ಅಡಿ ನಿವೇಶನವನ್ನು ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ವಾಕೈ 3 ರೇಮಾಮ 2001, ದಿನಾಂಕ: 12–12–2001.
2) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಪಿಎಸ್/ ಕಾಮಗಾರಿ/ ಕೆಎಸ್‌ಎಂಬಿ/ 52/ 01–02, ದಿನಾಂಕ: 6–7–2007, 27–11–2007.
3) ಸರ್ಕಾರದ ಪತ್ರ ಸಂಖ್ಯೆ: ವಾಕೈ 42 ರೇಯೋವಿ 2007, ದಿನಾಂಕ: 24–10–2007.

**ಪ್ರಸ್ತಾವನೆ:**

ರೇಷ್ಮೆ ಇಲಾಖೆಯ ಓಕಳಿಪುರಂನಲ್ಲಿ ಹೊಂದಿರುವ ರೇಷ್ಮೆ ಭವನದ ಸಂಕೀರ್ಣದಲ್ಲಿ ಖಾಲಿ ಇರುವ 200 X 100 ಅಡಿ ನಿವೇಶನವನ್ನು ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ಲೀಸ್ ಕಂ ಸೇಲ್ ಆಧಾರದ ಮೇಲೆ

ಹಸ್ತಾಂತರಿಸಿ ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ಆದೇಶಿಸಿ, ಈ ಬಗ್ಗೆ ಅಗತ್ಯ ದಾಖಲೆ ಪತ್ರಗಳನ್ನು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರಿಂದ ಪಡೆಯುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರಿಗೆ ಸೂಚಿಸಲಾಗಿತ್ತು.

ಓಕಳಿಪುರಂನಲ್ಲಿರುವ ರೇಷ್ಮೆ ಇಲಾಖೆಯ ಜಮೀನಿನಲ್ಲಿ ರೇಷ್ಮೆ ಸಂಕೀರ್ಣವನ್ನು ನಿರ್ಮಾಣ ಮಾಡುವ ಉದ್ದೇಶವಿರುವುದರಿಂದ ನಿರ್ಮಾಣ ಕಾರ್ಯಕ್ಕೆ ಈಗಾಗಲೇ ಚಾಲನೆ ನೀಡಿರುವುದರಿಂದ ಈ ಹಂತದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ಪ್ರತ್ಯೇಕವಾಗಿ ನಿವೇಶನ ನೀಡುವುದು ಸೂಕ್ತವಾಗಿರುವುದಿಲ್ಲವಾದ್ದರಿಂದ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ 200 X 100 ಅಡಿ ನಿವೇಶನ ಹಸ್ತಾಂತರಿಸಲು ಸರ್ಕಾರ ಹೊರಡಿಸಿರುವ ಆದೇಶವನ್ನು ಹಿಂದಕ್ಕೆ ಪಡೆಯುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ರೇಷ್ಮೆ ಸಂಕೀರ್ಣದ ನಿರ್ಮಾಣಕ್ಕಾಗಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ಜಮೀನು ನೀಡಲು ಹೊರಡಿಸಿರುವ ಆದೇಶವನ್ನು ಹಿಂದಕ್ಕೆ ಪಡೆಯಲು ರೇಷ್ಮೆ ಇಲಾಖೆಯು ಕೋರಿರುವ ಹಿನ್ನಲೆಯಲ್ಲಿ ಇಲಾಖೆಯು ಕಟ್ಟಲಿರುವ ರೇಷ್ಮೆ ಸಂಕೀರ್ಣದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ಸೂಕ್ತ ಸ್ಥಳಾವಕಾಶವನ್ನು ನೀಡುವ ವಿಷಯದಲ್ಲಿ ಅಭಿಪ್ರಾಯ ನೀಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ರೇಷ್ಮೆ ಆಯುಕ್ತರನ್ನು ಕೋರಲಾಯಿತು. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 27–11–2007ರ ಪತ್ರದಲ್ಲಿ ನಿರ್ಮಾಣಗೊಳ್ಳುವ ರೇಷ್ಮೆ ಇಲಾಖೆಯ ಸಂಕೀರ್ಣದಲ್ಲಿ ಇಲಾಖೆಗೆ ಲಭ್ಯವಾಗುವ ಸ್ಥಳಾವಕಾಶದಲ್ಲಿ ರೇಷ್ಮೆ ಇಲಾಖೆಯ ಸಹೋದರ ಸಂಸ್ಥೆಗಳಾದ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಹಾಗೂ ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ಈ ಸಂಸ್ಥೆಗಳಿಗೆ ಸ್ಥಳಾವಕಾಶ ಒದಗಿಸುವ ಉದ್ದೇಶವಿದೆಯೆಂದು ತಿಳಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ನಿವೇಶನ ನೀಡುವ ಕುರಿತಂತೆ ಹೊರಡಿಸಿರುವ ಆದೇಶವನ್ನು ಹಿಂದಕ್ಕೆ ಪಡೆಯಲು ತೀರ್ಮಾನಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ವಾಕೈ 42 ರೇಯೋವಿ 2007, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಓಕಳಿಪುರಂನಲ್ಲಿ ರೇಷ್ಮೆ ಇಲಾಖೆಯು ನಿರ್ಮಾಣ ಮಾಡುವ ಸಂಕೀರ್ಣದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ಸೂಕ್ತ ಸ್ಥಳಾವಕಾಶವನ್ನು ಒದಗಿಸಬೇಕೆಂಬ ಷರತ್ತಿನೊಂದಿಗೆ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ನಿವೇಶನ ಮಂಜೂರು ಮಾಡಿ ಹೊರಡಿಸಿರುವ ಸರ್ಕಾರಿ ಆದೇಶ ಸಂಖ್ಯೆ: ವಾಕೈ 3 ರೇಮಾಮ 2001, ದಿನಾಂಕ: 12–12–2001 ನ್ನು ಹಿಂದಕ್ಕೆ ಪಡೆಯಲಾಗಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 444

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ(ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ:** ಶ್ರೀಮತಿ ಗೀತಾ ಚಂದ್ರಶೇಖರ್, ಪ್ರಥಮ ದರ್ಜೆ ಸಹಾಯಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರನ್ನು ರೇಷ್ಮೆ ಇಲಾಖೆಗೆ ವರ್ಗಾಯಿಸಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:**

1) ಜಂಟಿ ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: ಉತಇ/ ತರಬೇತಿ/ ಆಡಳಿತ-5/ ವಿವ-21/06-07, ದಿನಾಂಕ: 19-6-2007.
2) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ: ಸಿಬ್ಬಂದಿ1(1)/ಪ್ರದಸ/ವರ್ಗ/102/05-06, ದಿನಾಂಕ: 5-7-2007.

**ಪ್ರಸ್ತಾವನೆ:**

ಶ್ರೀಮತಿ ಗೀತ ಚಂದ್ರಶೇಖರ್, ಪ್ರಥಮ ದರ್ಜೆ ಸಹಾಯಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ರೇಷ್ಮೆ ಇಲಾಖೆಯಲ್ಲಿ ದಿನಾಂಕ: 22-4-1985 ರಿಂದ 17-1-2005 ರವರೆಗೆ ರೇಷ್ಮೆ ಪ್ರದರ್ಶಕರಾಗಿ ಕಾರ್ಯನಿರ್ವಹಿಸಿದ್ದು, ನಂತರ ಸದರಿ ನೌಕರರು ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಆಯ್ಕೆಗೊಂಡು ಉದ್ಯೋಗ ಮತ್ತು ತರಬೇತಿ ಇಲಾಖೆಗೆ ಹಂಚಿಕೆಯಾಗಿ ಕಾರ್ಯನಿರ್ವಹಿಸುತ್ತಿದ್ದು, ರೇಷ್ಮೆ ಇಲಾಖೆಯಲ್ಲಿ ಸುಮಾರು 20 ವರ್ಷಗಳ ಕಾಲ ಕಾರ್ಯನಿರ್ವಹಿಸಿ, ಇಲಾಖೆಯ ಕಾರ್ಯಚಟುವಟಿಕೆಗಳ ಬಗ್ಗೆ ಪರಿಣತಿ ಹೊಂದಿರುವುದರಿಂದ ತಮ್ಮ ಸೇವೆಯನ್ನು ರೇಷ್ಮೆ ಇಲಾಖೆಯಲ್ಲಿ ವಿಲೀನಗೊಳಿಸುವಂತೆ ಕೋರಿರುತ್ತಾರೆ. ಸದರಿ ನೌಕರರು ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿ 2 ವರ್ಷಗಳ ಪರಿವೀಕ್ಷಣಾ

ಅವಧಿಯನ್ನು ತೃಪ್ತಿಕರವಾಗಿ ಪೂರೈಸಿದ್ದು, ಪರಿವೀಕ್ಷಣಾ ಅವಧಿಯನ್ನು ಇಲಾಖೆಯಲ್ಲಿ ದಿನಾಂಕ: 19-4-2007 ರಲ್ಲಿ ಘೋಷಿಸಲಾಗಿರುತ್ತದೆ. ಉದ್ಯೋಗ ಮತ್ತು ತರಬೇತಿ ಇಲಾಖೆಯ ಮುಖ್ಯಸ್ಥರು ಮೇಲೆ ಓದಲಾದ ಕ್ರಮಸಂಖ್ಯೆ(1)ರ ಪತ್ರದಲ್ಲಿ ಶ್ರೀಮತಿ ಗೀತ ಚಂದ್ರಶೇಖರ್‌ರವರ ಸೇವೆಯನ್ನು ರೇಷ್ಮೆ ಇಲಾಖೆಯಲ್ಲಿ ವಿಲೀನಗೊಳಿಸಲು ಯಾವುದೇ ಅಭ್ಯಂತರವಿಲ್ಲವೆಂದು ಅಭಿಪ್ರಾಯ ನೀಡಿರುತ್ತಾರೆ. ರೇಷ್ಮೆ ಇಲಾಖೆಯಲ್ಲಿ ಪ್ರಸ್ತುತ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳು ಖಾಲಿ ಇದ್ದು, ಈ ನೌಕರರು ರೇಷ್ಮೆ ಇಲಾಖೆಯಲ್ಲಿ ಅನ್ಯಕಾರ್ಯನಿಮಿತ್ತ ದಿನಾಂಕ: 19-8-2006 ರಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ರೇಷ್ಮೆ ಇಲಾಖೆಗೆ ಪ್ರಥಮ ದರ್ಜೆ ಸಹಾಯಕರ ಸೇವೆ ಅಗತ್ಯವಿರುವುದರಿಂದ ಶ್ರೀಮತಿ ಗೀತ ಚಂದ್ರಶೇಖರ್, ಪ್ರಥಮ ದರ್ಜೆ ಸಹಾಯಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರನ್ನು ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 16 ಮತ್ತು 16(A) ರನ್ವಯ ಉದ್ಯೋಗ ಮತ್ತು ತರಬೇತಿ ಇಲಾಖೆಯಿಂದ ರೇಷ್ಮೆ ಇಲಾಖೆಗೆ ವರ್ಗಾಯಿಸಿಕೊಳ್ಳಲು ಮೇಲೆ ಓದಲಾದ ಕ್ರಮಸಂಖ್ಯೆ(2)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಶ್ರೀಮತಿ ಗೀತಾ ಚಂದ್ರಶೇಖರ್, ಪ್ರಥಮ ದರ್ಜೆ ಸಹಾಯಕರು ಇವರು ಸುಮಾರು 20 ವರ್ಷಗಳ ಕಾಲ ರೇಷ್ಮೆ ಇಲಾಖೆಯಲ್ಲಿ ಕಾರ್ಯನಿರ್ವಹಿಸಿದ್ದು, ರೇಷ್ಮೆ ಇಲಾಖೆಯ ಕಾರ್ಯಚಟುವಟಿಕೆಗಳ ಬಗ್ಗೆ ಕಾರ್ಯಪರಿಣಿತಿ ಹೊಂದಿದವರಾಗಿರುವುದರಿಂದ ಇವರ ಸೇವೆಯನ್ನು ರೇಷ್ಮೆ ಇಲಾಖೆಯಲ್ಲಿ ವಿಲೀನಗೊಳಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ವಾಕೈ 117:ರೇಇವಿ:2007, ಬೆಂಗಳೂರು, ದಿನಾಂಕ:5ನೇ ಫೆಬ್ರವರಿ 2008**

ಶ್ರೀಮತಿ ಗೀತ ಚಂದ್ರಶೇಖರ್, ಪ್ರಥಮ ದರ್ಜೆ ಸಹಾಯಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಸೇವೆಯನ್ನು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಕಛೇರಿ, ರೇಷ್ಮೆ ಇಲಾಖೆ ಇಲ್ಲಿಯ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 16(ಎ)(ii)ರಲ್ಲಿ ಸಾರ್ವಜನಿಕ ಹಿತದೃಷ್ಟಿಯ ಮೇರೆಗೆ ಈ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾವಣೆ ಮೂಲಕ ನೇಮಿಸಿ ವಿಲೀನಗೊಳಿಸಲು ಅನುಮತಿ ನೀಡಿದೆ.

1. ಸಂಬಂಧಪಟ್ಟ ನೌಕರರು ಸಕ್ರಮವಾಗಿ ನೇಮಕಗೊಂಡಿರಬೇಕು ಹಾಗೂ ಅವರು ತಮ್ಮ ಮಾತೃ ಇಲಾಖೆಯಲ್ಲಿ ಪರಿವೀಕ್ಷಣಾವಧಿ/ಸ್ಥಾನಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರಬೇಕು;
2. ಸಂಬಂಧಪಟ್ಟ ನೌಕರರು ಮಾತೃ ಇಲಾಖೆಯಲ್ಲಿ ಹಾಲಿ ಹೊಂದಿರುವ ಹುದ್ದೆಯ ವೇತನ ಶ್ರೇಣಿ ಮತ್ತು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಹುದ್ದೆಯ ವೇತನ ಶ್ರೇಣಿಗಳು ಸಮಾನ ವೇತನ ಶ್ರೇಣಿಗಳಾಗಿರಬೇಕು;
3. ಸಂಬಂಧಪಟ್ಟ ನೌಕರರು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಹುದ್ದೆಗೆ ನಿಗದಿಪಡಿಸಿರಬಹುದಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರಬೇಕು;
4. ಪ್ರಸ್ತಾಪಿತ ವರ್ಗಾವಣೆ ಮೂಲಕ ನೇಮಕಾತಿಗೆ ನೌಕರರ ಮಾತೃ ಇಲಾಖೆ ಹಾಗೂ ಇವರನ್ನು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಇಲಾಖೆಗಳು ಒಪ್ಪಿರಬೇಕು;
5. ಪ್ರಸ್ತಾಪಿತ ವರ್ಗಾವಣೆ ಮೂಲಕ ನೇಮಕಾತಿಯನ್ನು ನೌಕರರ ಕೋರಿಕೆಯ ಮೇರೆಗೆ ಮಾಡಲು ಉದ್ದೇಶಿಸಿದಲ್ಲಿ, ವರ್ಗಾವಣೆ ಮೂಲಕ ನೇಮಿಸಲಾಗುವ ಹುದ್ದೆಯಲ್ಲಿ ಈ ನೌಕರರ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಟತೆ) ನಿಯಮಗಳು, 1957ರ ನಿಯಮ 6ರ ಮೊದಲನೇ ಪರಂತುಕದನುಸಾರ ನಿರ್ಧರಿಸಬೇಕು. ಈ ಬಗ್ಗೆ ನೌಕರರ ಒಪ್ಪಿಗೆಯನ್ನು ಬರವಣಿಗೆ ಮೂಲಕ ಪಡೆಯಬೇಕು;
6. ವರ್ಗಾವಣೆ ಮೂಲಕ ನೇಮಕಾತಿಯನ್ನು ನೌಕರರ ಸೇವಾವಧಿಯಲ್ಲಿ ಒಮ್ಮೆ ಮಾತ್ರ ಮಾಡಬಹುದು.
7. ನೌಕರರು ವರ್ಗಾವಣೆ ಭತ್ಯೆ ಪಡೆಯಲು ಅರ್ಹರಿರುವುದಿಲ್ಲ.

8. ಸದರಿ ನೌಕರರು ಅವರ ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಯ ವೇತನ ಶ್ರೇಣಿಯಲ್ಲಿ ವಿಲೀನಗೊಳಿಸತಕ್ಕದ್ದು ಮತ್ತು ಸಧ್ಯದಲ್ಲಿ ಅವರು ಮಾತೃ ಇಲಾಖೆಯಲ್ಲಿ ಪಡೆಯುತ್ತಿದ್ದ ಮೂಲ ವೇತನದ ಸಮಾನ ಹಂತದಲ್ಲಿ ವೇತನವನ್ನು ನಿಗದಿಗೊಳಿಸತಕ್ಕದ್ದು;
9. ರೇಷ್ಮೆ ಇಲಾಖೆಯಲ್ಲಿ ವಿಲೀನವಾದ ಮೇಲೆ ಈ ನೌಕರರ ಲೀನ್ ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿ ಉಳಿಯುವುದಿಲ್ಲ ಮತ್ತು ಪುನ: ಆ ಇಲಾಖೆಗೆ ಮರಳಿ ಹೋಗಲು ಅವಕಾಶವಿಲ್ಲ.

ಮೇಲ್ಕಂಡ ಷರತ್ತುಗಳಿಗೆ ಒಪ್ಪಿ ರೇಷ್ಮೆ ಇಲಾಖೆಯಲ್ಲಿ ವಿಲೀನ ಹೊಂದುವುದಾಗಿ ನೌಕರರು ಮೊದಲೇ ಮುಚ್ಚಳಿಕೆ ಬರೆದುಕೊಡತಕ್ಕದ್ದು.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ 399 ಸೇನಿಎ 2007, ದಿನಾಂಕ: 29-08-2007ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 302

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ(ರೇಷ್ಮೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ:** ಶ್ರೀ ಫೈರೋಜ ಖಾನ್, ಡಿ–ದರ್ಜೆ ನೌಕರರು (ಸಂಖ್ಯಾತಿರಿಕ್ತ) ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಿ ವಿಧಿಸಿರುವ ದಂಡನೆ ಕುರಿತಂತೆ ಮೇಲ್ಮನವಿ ಬಗ್ಗೆ.

**ಓದಲಾಗಿದೆ:** 1) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಆದೇಶ ಸಂಖ್ಯೆ: ಸಿ3/ಶಿಸ್ತು/11/2001–02, ದಿನಾಂಕ: 31–1–2006.
2) ಶ್ರೀ ಪೈರೋಜಾ ಖಾನ್, ಡಿ–ದರ್ಜೆ ನೌಕರರು (ಸಂಖ್ಯಾತಿರಿಕ್ತ) ತಾಂತ್ರಿಕ ಸೇವಾ ಕೇಂದ್ರ, ಬೀದರ್ ಇವರ ಮನವಿ ದಿನಾಂಕ: 9–10–2007.

**ಪ್ರಸ್ತಾವನೆ:**

ಶ್ರೀ ಪೈರೋಜಾ ಖಾನ್, ಡಿ–ದರ್ಜೆ ನೌಕರರು (ಸಂಖ್ಯಾತಿರಿಕ್ತ) ಇವರು ರೇಷ್ಮೆ ಗೂಡಿನ ಮಾರುಕಟ್ಟೆ, ಶಿಡ್ಲಘಟ್ಟ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಹಣ ದುರುಪಯೋಗದ ಹಾಗೂ ಕರ್ತವ್ಯಲೋಪದ ಆರೋಪಗಳಿಗೆ ಕುರಿತಂತೆ ಸಿಸಿಎ ನಿಯಮಗಳನ್ವಯ ವಿಚಾರಣೆ ನಡೆಸಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಈ ಕೆಳಗಿನ ದಂಡನೆ ವಿಧಿಸಿ ಆದೇಶಿಸಿರುತ್ತಾರೆ.

1. ನೌಕರರು ಉಂಟು ಮಾಡಿರುವ ನಷ್ಟದ ರೂ. 16,885.65 (ಹದಿನಾರು ಸಾವಿರದ ಎಂಟು ನೂರಾ ಎಂಬತ್ತೈದು ಮತ್ತು ಅರವತ್ತೈದು ಪೈಸೆ) ಯನ್ನು ಶ್ರೀ ಫೈರೋಜ ಖಾನ್‌ರವರಿಂದ ವಸೂಲಿ ಮಾಡಿ ಸರ್ಕಾರಕ್ಕೆ ಜಮಾ ಮಾಡುವುದು.
2. ಸದರಿ ನೌಕರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮದೊಂದಿಗೆ ತಡೆಹಿಡಿಯುವುದು.

ಈ ದಂಡನೆ ಆದೇಶದ ವಿರುದ್ಧ ದಂಡಿತ ನೌಕರರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಶಿಸ್ತು ಕ್ರಮ ಜರುಗಿಸಿ ದಿ: 31–1–2006ರಂದು ಹೊರಡಿಸಿದ ದಂಡನೆ ಆದೇಶದಲ್ಲಿ ರೂ. 16,885.65 ನ್ನು ಸರ್ಕಾರಕ್ಕೆ ಕಟ್ಟುವ ಮತ್ತು ಒಂದು ವಾರ್ಷಿಕ ಬಡ್ತಿಯನ್ನು ಸಂಚಿತ ಪರಿಣಾಮದೊಂದಿಗೆ ತಡೆಹಿಡಿಯುವಂತೆ ದಂಡನೆ ವಿಧಿಸಲಾಗಿದೆ. ಅದರಂತೆ ಸುಲಭ ಕಂತುಗಳ ಆಧಾರದಲ್ಲಿ ತನ್ನ ವೇತನದಲ್ಲಿ ರೂ. 16,885.65 ಕಡಿತಗೊಳಿಸಿ ಸರ್ಕಾರಕ್ಕೆ ಭರಿಸಲು ತನ್ನ ಒಪ್ಪಿಗೆಯನ್ನು ನೀಡಿರುವುದಾಗಿ ತಿಳಿಸಿ, ತಾನು ಡಿ–ದರ್ಜೆ ನೌಕರನಾಗಿದ್ದರೂ ತನಗೆ ಹಿಂದೆ ಕಾರ್ಯನಿರ್ವಹಿಸುತ್ತಿದ್ದ ಮಾರುಕಟ್ಟೆಯಲ್ಲಿ ಹಣಕಾಸಿನ ವ್ಯವಹಾರದ ವಿಭಾಗ ನಡೆಸಲು ಆದೇಶಿಸಲಾಗಿತ್ತು. ಹಣಕಾಸಿನ ವ್ಯವಹಾರ ತಿಳಿಯದೇ ಏರುಪೇರಾಗಿರುವುದರಿಂದ, ಅಮಾಯಕನಾದ ತಾನು ಬಲಿಪಶುವಾಗಿರುವುದಾಗಿಯೂ ತಾನೊಬ್ಬ ಬಡ ಕುಟುಂಬಕ್ಕೆ ಸೇರಿದ ಡಿ–ದರ್ಜೆ ನೌಕರನಾಗಿದ್ದು, ಬರುವ ಅಲ್ಪ ವೇತನದಲ್ಲಿ ಸಂಸಾರ ನಿರ್ವಹಣೆ ನೋಡಿಕೊಳ್ಳಲು ಪ್ರಯಾಸ ಪಡುತ್ತಿದ್ದು, ತನ್ನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮದಿಂದ ತಡೆಹಿಡಿದಿರುವುದು ತನ್ನ ಕುಟುಂಬದ ಸದಸ್ಯರನ್ನು ಆರ್ಥಿಕ ದುರ್ಬಲರನ್ನಾಗಿ ಮಾಡಿದೆ. ಆದ್ದರಿಂದ ತನ್ನ ಕುಟುಂಬದ ಜೀವನದ ಮೇಲೆ ಆರ್ಥಿಕ ಹೊರ ಬೀಳದಂತೆ ಬಡ ಡಿ–ದರ್ಜೆ ನೌಕರನ ಮೇಲೆ ವಿಧಿಸಿರುವ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮದಿಂದ ತಡೆಹಿಡಿಯುವ ದಂಡನೆ ಆದೇಶವನ್ನು ರದ್ದುಪಡಿಸಬೇಕಾಗಿ ಕೋರುತ್ತಿರುವುದಾಗಿ ತಿಳಿಸಿರುತ್ತಾರೆ.

ದಂಡಿತ ನೌಕರರು ಮೇಲ್ಮನವಿಯನ್ನು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ಮತ್ತು ಮೇಲ್ಮನವಿಯನ್ನು ನಿಗದಿತ ಕಾಲಾವಧಿಯೊಳಗೆ ಸಲ್ಲಿಸಿರುವುದಿಲ್ಲ. ಮೇಲ್ಮನವಿಯನ್ನು ವಿಳಂಬವಾಗಿ ಸಲ್ಲಿಸಿರುವುದಕ್ಕೆ ಯಾವುದೇ ಕಾರಣವನ್ನು ತಿಳಿಸಿರುವುದಿಲ್ಲ.

ಈ ಅಂಶಗಳ ಹಿನ್ನಲೆಯಲ್ಲಿ ದಂಡಿತ ನೌಕರರ ಮೇಲ್ಮನವಿಯನ್ನು ತಿರಸ್ಕರಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 167 ರೇಇವಿ 2007, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಫೈರೋಜಾ ಖಾನ್, ಡಿ-ದರ್ಜೆ ನೌಕರರು (ಸಂಖ್ಯಾತಿರಿಕ್ತ) ಇವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 20 ರಲ್ಲಿ ನಿಗದಿಪಡಿಸಿರುವ ಕಾಲಾವಧಿಯೊಳಗೆ ಮನವಿ ಸಲ್ಲಿಸದೇ ಇರುವುದರಿಂದ ಸದರಿ ನಿಯಮದನ್ವಯ ಇವರ ಮನವಿಯನ್ನು ಪರಿಗಣಿಸಲು ಅವಕಾಶವಿರುವುದಿಲ್ಲ. ಆದ್ದರಿಂದ ನಿಗದಿತ ಕಾಲಾವಧಿಯೊಳಗೆ ಸಲ್ಲಿಸದೇ ವಿಳಂಬವಾಗಿ ಸಲ್ಲಿಸಿರುವ ಇವರ ಮೇಲ್ಮನವಿಯನ್ನು ತಿರಸ್ಕರಿಸಿದೆ. ಮತ್ತು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 25ರ 2ನೇ ಉಪನಿಯಮದ (ಸಿ) ರನ್ವಯ ಶಿಸ್ತು ಪ್ರಾಧಿಕಾರಿಯಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ದಿನಾಂಕ: 31-1-2006 ರಂದು ಹೊರಡಿಸಿರುವ ಆದೇಶ ಸಂಖ್ಯೆ: ಸಿ3/ಶಿಸ್ತು/11/2001-02 ನ್ನು ಸ್ಥಿರೀಕರಿಸಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 307

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ(ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ:** 2007-08ನೇ ಸಾಲಿನಲ್ಲಿ ಕಬ್ಬು ಬೆಳೆದ ರೈತರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ-2) ದಿನಾಂಕ: 13.06.07.

**ಪ್ರಸ್ತಾವನೆ:**

ರಾಜ್ಯದಲ್ಲಿ 2007-08ನೇ ಸಾಲಿನಲ್ಲಿ ಒಟ್ಟು 340 ಲಕ್ಷ ಟನ್ ಕಬ್ಬು ಬೆಳೆಯಲಾಗುವುದೆಂದು ಅಂದಾಜಿಸಲಾಗಿದೆ. ರಾಜ್ಯದಲ್ಲಿ ಒಟ್ಟು 55 ಸಕ್ಕರೆ ಕಾರ್ಖಾನೆಗಳ ಪೈಕಿ ಪ್ರಸಕ್ತ ಸಾಲಿನಲ್ಲಿ ಒಟ್ಟು 46 ಸಕ್ಕರೆ ಕಾರ್ಖಾನೆಗಳು ಕಾರ್ಯ ನಿರ್ವಹಿಸುತ್ತಿವೆ. ಅಂದಾಜಿಸಲಾಗಿರುವ 340 ಲಕ್ಷ ಟನ್ ಕಬ್ಬಿನಲ್ಲಿ 270 ಲಕ್ಷ ಟನ್ ಕಬ್ಬನ್ನು ನುರಿಸಲಾಗುವುದೆಂದು ಅಂದಾಜು ಮಾಡಲಾಗಿದೆ. ಬೆಲ್ಲ ಮತ್ತು ಬೀಜಕ್ಕಾಗಿ ಉಪಯೋಗಿಸಿಕೊಂಡ ನಂತರ ನುರಿಸದೇ ಉಳಿಯುವ ಕಬ್ಬಿನ ಪ್ರಮಾಣ ಅಂದಾಜು ಸುಮಾರು 25 ಲಕ್ಷ ಟನ್ ಆಗುವ ಸಂಭವವಿದೆ. 2006-07ನೇ ಸಾಲಿಗೆ ಹೋಲಿಸಿದಲ್ಲಿ ಈ ವರ್ಷವು ಸಹ ನುರಿಸಲ್ಪಡದೇ ಉಳಿಯುವ ಕಬ್ಬು 90 ಲಕ್ಷ ಟನ್‌ಗಳಾಗುವ ಸಂಬವವಿದೆ. ಬೆಲೆಯ ಕುಸಿತದಿಂದಾಗಿ ಬೆಲ್ಲ ತಯಾರಿಕೆಗಾಗಿ ಸಾಗಾಣಿಕೆಯಾಗುತ್ತಿದ್ದ ಕಬ್ಬನ್ನೂ ಸಕ್ಕರೆ ಕಾರ್ಖಾನೆಗಳು ನುರಿಸಬೇಕಾಗಿರುತ್ತದೆ. ಪ್ರಸಕ್ತ ಪರಿಸ್ಥಿತಿಯಿಂದ ಉದ್ವೇಗಗೊಂಡಿರುವ ಕಬ್ಬು ಬೆಳೆಗಾರರು ಕಳೆದ ಕೆಲವು ವಾರಗಳಿಂದ ಸರ್ಕಾರಕ್ಕೆ ಹಲವಾರು ಮನವಿಗಳನ್ನು ಸಲ್ಲಿಸಿರುತ್ತಾರೆ. ಕಬ್ಬು ಬೆಳೆಗಾರರ ಪ್ರಮುಖ ಬೇಡಿಕೆಗಳು ಈ ಕೆಳಗಿನಂತಿವೆ.

ಅ) ಉತ್ತರ ಪ್ರದೇಶ, ಆಂಧ್ರ ಪ್ರದೇಶ ಮತ್ತು ತಮಿಳುನಾಡು ರಾಜ್ಯಗಳು ನಿಗಧಿಪಡಿಸಿರುವ ಕಬ್ಬಿನ ದರದಂತೆ ರಾಜ್ಯದಲ್ಲೂ ಸಹ ದರ ನಿಗಧಿ ಘೋಷಣೆ ಮಾಡಬೇಕು ಹಾಗೂ ಈ ದರವು ಕೇಂದ್ರ ಸರ್ಕಾರವು 2007-08ನೇ ಸಾಲಿಗೆ ಘೋಷಿಸಿರುವ ಶಾಸನಬದ್ಧ ಬೆಲೆಗಿಂತ ಹೆಚ್ಚಿರಬೇಕು.

ಆ) ರಫ್ತು ಸಹಾಯಧನ, ಕಬ್ಬು ಖರೀದಿ ತೆರಿಗೆ ಮನ್ನಾ, ಇತ್ಯಾದಿ ರೂಪದಲ್ಲಿ ಸಕ್ಕರೆ ಕಾರ್ಖಾನೆಗಳಿಗೆ ನೀಡಿರುವ ವಿವಿಧ ಪ್ಯಾಕೇಜ್‌ಗಳು ರೈತರಿಗೆ ತಲುಪಿರುವುದಿಲ್ಲವೆಂದು, ಈ ಸೌಲಭ್ಯಗಳನ್ನು ಕಾರ್ಖಾನೆಗಳು ಕಬ್ಬು ಬೆಳೆದ ರೈತರಿಗೆ ವರ್ಗಾಯಿಸುವುದನ್ನು ಖಚಿತಪಡಿಸಿಕೊಳ್ಳಬೇಕು.

ಇ) ಹಲವಾರು ಕಾರ್ಖಾನೆಗಳು ಎಸ್.ಎಂ.ಪಿ. ದರಕ್ಕಿಂತಲೂ ಕಡಿಮೆ ದರ ಪಾವತಿಯನ್ನು ಮುಂದುವರಿಸಿದ್ದು ಮತ್ತು ಈ ಹಣ ನೀಡಲು ಒಂದಲ್ಲ ಒಂದು ಕಾರಣ ನೀಡಿ ತಡ ಮಾಡುತಿವೆ. ಇಂಥಹ ಕಾರ್ಖಾನೆಗಳ ಮೇಲೆ ಸೂಕ್ತ ಕ್ರಮ ಜರುಗಿಸಬೇಕು.

ಈ) 2006-07ನೇ ಸಾಲಿಗೆ ಘೋಷಿಸಿರುವ ಪ್ಯಾಕೇಜಗಳಿಗೆ ಸರ್ಕಾರದಿಂದ ಇದುವರೆಗೂ ಹಣ ಬಿಡುಗಡೆಯಾಗಿರುವುದಿಲ್ಲ. 2006-07ನೇ ಸಾಲಿನಲ್ಲಿ ಕಟಾವಾಗದೇ ಜಮೀನಿನಲ್ಲಿ ಉಳಿದ ಪ್ರತಿ ಹೆಕ್ಟೇರ್ ಕಬ್ಬಿಗೆ 25,000 ರೂ.ಗಳ ಸಹಾಯಧನ ರೈತರಿಗೆ ಬಿಡುಗಡೆಯಾಗಬೇಕು.

ಹಾಗೂ ಸಕ್ಕರೆ ಕಾರ್ಖಾನೆಗಳ ಸಮಸ್ಯೆಗಳಿಗೆ ಸಂಬಂಧಿಸಿದಂತೆ, ಹಾಗೂ ಕಬ್ಬಿಗೆ ಸೂಕ್ತ ಬೆಲೆ ನೀಡುವ ಸಂಬಂಧ ಸಕ್ಕರೆ ಕಾರ್ಖಾನೆಗಳ ಪ್ರತಿನಿಧಿಗಳು ಅಂದರೆ ದಕ್ಷಿಣ ಭಾರತ ಸಕ್ಕರೆ ಕಾರ್ಖಾನೆಗಳ ಸಂಘ (ಸಿಸ್ಮಾ), ಕರ್ನಾಟಕ ಸಹಕಾರ ಸಕ್ಕರೆ

ಕಾರ್ಖಾನೆಗಳ ಮಹಾಮಂಡಳಿ ಇವರುಗಳೊಂದಿಗೆ ನಡೆದ ಹಲವು ಸುತ್ತಿನ ಚರ್ಚೆಗಳಲ್ಲಿ ಕಾರ್ಖಾನೆಗಳು ಈ ಕೆಳಕಂಡ ಕಾರಣಗಳನ್ನು ನೀಡಿ ಎಸ್.ಎಂ.ಪಿ.ಗಿಂತ ಹೆಚ್ಚಿನ ದರವನ್ನು ಪಾವತಿಸಲು ತಮ್ಮ ಅಸಹಾಯಕತೆ ವ್ಯಕ್ತಪಡಿಸಿವೆ.

I. ಮುಕ್ತ ಮಾರುಕಟ್ಟೆ ಸಕ್ಕರೆ ದರವು ಲೆವಿ ಸಕ್ಕರೆ ದರಕ್ಕಿಂತಲೂ ಕಡಿಮೆ ಅಥವಾ ಅದರ ಅಸುಪಾಸಿನಲ್ಲಿಯೇ ಇದ್ದು, ಇದರಿಂದಾಗಿ ಹೆಚ್ಚುತ್ತಿರುವ ಸಕ್ಕರೆ ದಾಸ್ತಾನನ್ನು ಕರಗಿಸಲು ಸಾಧ್ಯವಾಗುತ್ತಿಲ್ಲ.

II. ಕಾರ್ಖಾನೆಗಳಲ್ಲಿರುವ ಲೆವಿ ಸಕ್ಕರೆಯನ್ನು ಎತ್ತುವಳಿ ಮಾಡದಿರುವುದರಿಂದ ಹಾಗೂ ಮುಕ್ತ ಮಾರುಕಟ್ಟೆ ಸಕ್ಕರೆ ಮಾರಾಟವು ಸಹ ಕುಸಿದಿರುವುದರಿಂದ ಕಾರ್ಖಾನೆಗಳು ತೀವ್ರವಾದ ಹಣಕಾಸಿನ ಬಿಕ್ಕಟ್ಟು ಎದುರಿಸುತ್ತಿವೆ.

III. ಅಬಕಾರಿ ಇಲಾಖೆಯು ಮೊಲಾಸಸ್ ಸಾಗಾಣಿಕೆಗೆ ಪ್ರಸಕ್ತ ವಿಧಿಸಿರುವ ನಿರ್ಬಂಧದಿಂದಾಗಿ ಸಕ್ಕರೆ ಕಾರ್ಖಾನೆಗಳು ಆರ್ಥಿಕವಾಗಿ ತೊಂದರೆ ಎದುರಿಸುತ್ತಿವೆ ಎಂಬುದಾಗಿ ಸಕ್ಕರೆ ಕಾರ್ಖಾನೆಗಳ ಮಾಲೀಕರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

2006–07ನೇ ಸಾಲಿಗೆ ಹಲವಾರು ರಿಯಾಯಿತಿಯನ್ನು ಘೋಷಿಸಲಾಗಿತ್ತು. ಆದರೂ ಸಹ ಕೆಲವು ಬೇಡಿಕೆಗಳನ್ನು ಇನ್ನೂ ಪರಿಹರಿಸಬೇಕಾಗಿದೆ. ರಾಜ್ಯದಲ್ಲಿ 2006–07ನೇ ಸಾಲಿನಲ್ಲಿ ಹೆಚ್ಚು ಕಬ್ಬಿನ ಉತ್ಪಾದನೆಯಾಗಿರುವ ಹಿನ್ನೆಲೆಯಲ್ಲಿ, ಕಬ್ಬು ಬೆಳೆಗಾರರ ಹಾಗೂ ಸಕ್ಕರೆ ಉದ್ಯಮದ ಹಿತದೃಷ್ಟಿಯಿಂದ ಹಾಗೂ ಉದ್ಯಮವನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ 12 ತಿಂಗಳು ಪೂರೈಸಿ ಪಕ್ವವಾದ ಹಾಗೂ ಕಟಾವಾಗದೇ ಜಮೀನಿನಲ್ಲಿ ಉಳಿದಿರುವ ಕಬ್ಬಿಗೆ ರೈತರಿಗೆ ಪ್ರತಿ ಹೆಕ್ಟೇರ್‌ಗೆ ರೂ.25,000/–ಗಳ ಸಹಾಯಧನವನ್ನು ಒಟ್ಟಾರೆ 10000 ಹೆಕ್ಟೇರ್‌ಗೆ ಸೀಮಿತಗೊಳಿಸಿದ್ದು ಈಗಾಗಲೇ ಇದಕ್ಕಾಗಿ ರೂ.25.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ರೈತರಿಗೆ ನೀಡಬೇಕಾದ ಪರಿಹಾರಧನಕ್ಕೆ ಮತ್ತಷ್ಟು ಬೇಡಿಕೆ ಬಂದಿದ್ದು, ಜಿಲ್ಲಾಧಿಕಾರಿಗಳಿಂದ ಬಂದ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರದ ವಿನಾಯಿತಿ ಯೋಜನೆಯಡಿ ಬರುವ ಪ್ರಕರಣಗಳನ್ನು ಒಪ್ಪಿಕೊಳ್ಳಬಹುದಾಗಿದೆ ಎಂದು ತಿಳಿಸುತ್ತಾ ಈ ಕೆಳಕಂಡ 4 ಜಿಲ್ಲೆಗಳ ಕಬ್ಬು ಬೆಳೆಗಾರರಿಗೆ 14,89,11,000/– ರೂ.ಗಳನ್ನು ಹೆಚ್ಚುವರಿಯಾಗಿ ಬಿಡುಗಡೆ ಮಾಡಲು ಕಬ್ಬು ಅಭಿವೃದ್ಧಿ ಆಯುಕ್ತರು ಕೋರಿರುತ್ತಾರೆ.

| | | |
|---|---|---|
| 1) ಬಿಜಾಪುರ ಜಿಲ್ಲೆ | ರೂ. | 946.10 ಲಕ್ಷಗಳು |
| 2) ಬಾಗಲಕೋಟೆ ಜಿಲ್ಲೆ | ರೂ. | 324.81 ಲಕ್ಷಗಳು |
| 3) ಚಾಮರಾಜನಗರ ಜಿಲ್ಲೆ | ರೂ. | 213.95 ಲಕ್ಷಗಳು |
| 4) ಹಾವೇರಿ ಜಿಲ್ಲೆ | ರೂ. | 4.25 ಲಕ್ಷಗಳು |
| **ಒಟ್ಟು** | **ರೂ.** | **1489.11 ಲಕ್ಷಗಳು** |

12 ತಿಂಗಳು ಪೂರೈಸಿ ಪಕ್ವವಾದ ಹಾಗೂ ಕಟಾವಾಗದೇ ಜಮೀನಿನಲ್ಲಿ ಉಳಿದಿರುವ ಕಬ್ಬಿಗೆ ರೈತರಿಗೆ ಪ್ರತಿ ಹೆಕ್ಟೇರ್‌ಗೆ ನೀಡುವ 25,000 ರೂ.ಗಳ ಪರಿಹಾರವನ್ನು 25 ಕೋಟಿ ರೂ.ಗಳಿಗೆ ಸೀಮಿತಗೊಳಿಸಲು ದಿನಾಂಕ: 13.06.07ರ ಆದೇಶದಲ್ಲಿ ತಿಳಿಸಲಾಗಿದೆ. ಜಿಲ್ಲೆಗಳಿಂದ ಬಂದಿರುವ ಹೆಚ್ಚಿನ ಪ್ರಮಾಣದ ಪ್ರಸ್ತಾವನೆಗಳಿಂದಾಗಿ ಈ ನಿರ್ಬಂಧವನ್ನು ಸಡಿಲಿಸಬೇಕಾಗಿದೆ. ಮೇಲಿನ ಹೆಚ್ಚುವರಿ ಬೇಡಿಕೆ 1489.11 ಲಕ್ಷ ರೂ.ಗಳನ್ನು ರೈತರ ಹಿತದೃಷ್ಟಿಯಿಂದ ಬಿಡುಗಡೆಗೊಳಿಸುವ ಅವಶ್ಯಕತೆ ಇದೆ. ಕಬ್ಬು ಬೆಳಗಾರರು ಈ ಹಣವನ್ನು ಬೇಗನೆ ಬಿಡುಗಡೆ ಮಾಡುವಂತೆ ಈಗಾಗಲೇ ರಾಜ್ಯಾದ್ಯಂತ ಧರಣಿ ನಡೆಸಿದ್ದು, ಘನತೆವೆತ್ತ ರಾಜ್ಯಪಾಲರಿಗೂ ಹಲವಾರು ಮನವಿಗಳನ್ನು ಸಲ್ಲಿಸಿರುತ್ತಾರೆ. ಆದುದರಿಂದ ರೂ.1489.11 ಲಕ್ಷಗಳನ್ನು ಬಿಡುಗಡೆ ಮಾಡಲು, ದಿನಾಂಕ 04.07.2007ರಂದು ನಡೆದ ಸಚಿವ ಸಂಪುಟ ಸಭೆಯು ತೀರ್ಮಾನಿಸಿರುವ ಒಟ್ಟಾರೆ 10000 ಹೆಕ್ಟೇರ್‌ಗೆ ಸೀಮಿತಗೊಳಿಸಬೇಕೆಂಬ ನಿರ್ಬಂಧವನ್ನು ಸಡಿಲಿಸುವ ಅವಶ್ಯಕತೆ ಇದೆ.

ಇದಲ್ಲದೆ, ರಾಜ್ಯದ ಸಕ್ಕರೆ ಕಾರ್ಖಾನೆಗಳ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಕಾರ್ಖಾನೆಗಳ ಬೇಡಿಕೆಗಳನ್ನು ಕಾರ್ಖಾನೆಗಳ ಮಾಲೀಕರೊಂದಿಗೆ/ರೈತರ ಪ್ರತಿನಿಧಿಗಳೊಂದಿಗೆ ಹಲವಾರು ಬಾರಿ ಚರ್ಚಿಸಿ ಪರಿಶೀಲಿಸಲಾಗಿದ್ದು, 2007–08ನೇ ಸಾಲಿಗೆ ಈ ಕೆಳಕಂಡ ಕೆಲವು ರಿಯಾಯಿತಿಗಳನ್ನು ಕಬ್ಬು ಬೆಳೆಗಾರ ರೈತರು ಹಾಗೂ ಸಕ್ಕರೆ ಉದ್ಯಮದ ಹಿತದೃಷ್ಟಿಯಿಂದ ಘೋಷಿಸಲು ನಿರ್ಧರಿಸಲಾಗಿದೆ.

1. 01.04.2008 ರಿಂದ 31.07.2008 ರವರೆಗೆ ಕಬ್ಬು ಖರೀದಿ ತೆರಿಗೆಯನ್ನು ಮನ್ನಾ ಮಾಡುವುದು.
2. 01.04.2008 ನಂತರ 31.07.2008ರ ವರೆಗೆ ನುರಿಸಲಾದ ಕಬ್ಬಿಗೆ ಪ್ರತಿ ಮೆ.ಟನ್‌ಗೆ ರೂ.100/– ರೂನಂತೆ ಸಹಾಯಧನ.
3. 2006–07ನೇ ಸಾಲಿನಲ್ಲಿ ವಿಸ್ತರಿಸಿದ ಅವಧಿಯ ನಂತರವೂ ಅಂದರೆ 01.06.07 ರಿಂದ 31.7.2007ರ ನಡುವಿನ ಅವಧಿಯಲ್ಲಿ ನುರಿಸಿದ ಕಬ್ಬಿಗೆ ರೂ.8.75 ಕೋಟಿ ರೂಗಳ ಸಹಾಯಧನ.
4. 30 ಕಿ.ಮೀಗೆ ಮೀರಿದ ದೂರದಿಂದ ಸಾಗಾಣಿಕೆ ಮಾಡಿದ ಕಬ್ಬಿಗೆ ಪ್ರತಿ ಟನ್‌ಗೆ / ಪ್ರತಿ ಕಿ.ಮಿ.ಗೆ ರೂ.2/– ರಂತೆ ಸಾಗಾಣಿಕೆ ಸಹಾಯಧನ.
5. ಕೇಂದ್ರ ಸರ್ಕಾರದ ಯೋಜನೆಯ ಜೊತೆಗೆ ರಫ್ತು ಮಾಡಲಾದ ಸಕ್ಕರೆಗೆ ಪ್ರತಿ ಕ್ವಿಂಟಲ್‌ಗೆ ರೂ.100/–ರಂತೆ ಸಹಾಯಧನ.
6. ಮೊಲಾಸಸ್ ಸಾಗಾಣಿಕೆಗೆ ಇರುವ ನಿಯಂತ್ರಣವನ್ನು ಸಡಿಲಗೊಳಿಸುವುದು.

ಮೇಲಿನ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಐ 19 ಎಸ್‌ಜಿಎಫ್ 2008 (ಭಾ–2), ಬೆಂಗಳೂರು, ದಿನಾಂಕ : 12ನೇ ಮಾರ್ಚ್ 2008.**

ಮೇಲೆ ಓದಲಾದ (1)ರಲ್ಲಿರುವ ದಿನಾಂಕ: 13.06.07ರ ಆದೇಶದಲ್ಲಿ 2006–07ನೇ ಸಾಲಿನಲ್ಲಿ 12 ತಿಂಗಳು ಪೂರೈಸಿ ಪಕ್ವವಾದ ಹಾಗೂ ಕಟಾವಾಗದೇ ಜಮೀನಿನಲ್ಲಿ ಉಳಿದಿರುವ ಪ್ರತಿ ಹೆಕ್ಟೇರ್ ಕಬ್ಬಿಗೆ 25000/– ರೂಗಳ ಪರಿಹಾರ ಧನವನ್ನು 10.000 ಹೆಕ್ಟೇರ್‌ಗೆ ಹಾಗೂ 25.00 ಕೋಟಿ ರೂಗಳಿಗೆ ಸೀಮಿತಗೊಳಿಸಲಾಗಿದ್ದು, ಜಿಲ್ಲಾಧಿಕಾರಿಗಳಿಂದ ಹೆಚ್ಚಿನ ಬೇಡಿಕೆಗಳು ಬಂದ ಹಿನ್ನಲೆಯಲ್ಲಿ 25.00 ಕೋಟಿ ರೂಗಳಿಗೆ ಸೀಮಿತಗೊಳಿಸಿದ್ದ ಈ ನಿರ್ಬಂಧವನ್ನು ಸಡಿಲಿಸಲಾಗಿದೆ.

ರಾಜ್ಯದ ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನ ಹಂಗಾಮಿಗೆ ಸಂಬಂಧಿಸಿದಂತೆ ದಿನಾಂಕ: 31.03.07ರ ಅಂತ್ಯಕ್ಕೆ 12 ತಿಂಗಳು ಮೀರಿ ಪಕ್ವವಾದ ರಾಜ್ಯದ ರೈತರು ಬೆಳೆದ ಎಲ್ಲಾ ಕಬ್ಬನ್ನು ನುರಿಸಬೇಕೆಂದು ಆದೇಶಿಸುತ್ತಾ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಈ ಕೆಳಕಂಡ ಸಹಾಯಧನ ಸೌಲಭ್ಯವನ್ನು ನೀಡಲು ರಾಜ್ಯ ಸರ್ಕಾರವು ನಿರ್ಧರಿಸಿದೆ.

1. 2006–07ನೇ ಸಾಲಿನಲ್ಲಿ ವಿಸ್ತರಿಸಿದ ಅವಧಿಯ ನಂತರವೂ ಅಂದರೆ 01.06.07 ರಿಂದ 31.7.2007ರ ನಡುವಿನ ಅವಧಿಯಲ್ಲಿ ನುರಿಸಿದ ಕಬ್ಬಿಗೆ ರೂ.8.75 ಕೋಟಿ ರೂಗಳ ಸಹಾಯಧನ. (ಪ್ರತ್ಯೇಕ ಆದೇಶ ಹೊರಡಿಸಲಾಗುವುದು).
2. ದಿನಾಂಕ: 01.04.08 ರಿಂದ ದಿನಾಂಕ: 31.07.2008ರ ವರೆಗೆ ವಿಸ್ತರಿಸಿದ ಅವಧಿಯಲ್ಲಿ ಕಾರ್ಖಾನೆಗಳಲ್ಲಿ ನುರಿಸಲಾದ ಕಬ್ಬಿಗೆ ಪ್ರತಿ ಮೆ.ಟನ್‌ಗೆ ರೂ.100/–ರೂನಂತೆ ಸಹಾಯಧನ.
3. 30 ಕಿ.ಮೀಗೆ ಮೀರಿದ ದೂರದಿಂದ ಸಾಗಾಣಿಕೆ ಮಾಡಿದ ಕಬ್ಬಿಗೆ ಪ್ರತಿ ಟನ್‌ಗೆ / ಪ್ರತಿ ಕಿ.ಮಿ.ಗೆ ರೂ.2/–ರಂತೆ ಸಾಗಾಣಿಕೆ ಸಹಾಯಧನ. ಈ ಸಾಗಾಣಿಕೆ ಸಹಾಯಧನ ಆದೇಶದ ದಿನಾಂಕದಿಂದ ಅನ್ವಯವಾಗಲಿದೆ.
4. ರಾಜ್ಯದ ಸಕ್ಕರೆ ಕಾರ್ಖಾನೆಗಳು ರಫ್ತು ಮಾಡಲಾದ ಸಕ್ಕರೆಗೆ ಪ್ರತಿ ಕ್ವಿಂಟಲ್‌ಗೆ ರೂ.100/–ರಂತೆ ರಫ್ತು ಸಹಾಯಧನ. ಈ ಸಹಾಯಧನವು ಆದೇಶದ ದಿನಾಂಕದಿಂದ ಕೇಂದ್ರ ಸರ್ಕಾರವು ರಫ್ತು ಸಹಾಯಧನ ನೀಡುವ ಅವಧಿಯ ದಿನಾಂಕದವರೆಗೆ ಮಾತ್ರ ಜಾರಿಯಲ್ಲಿರುತ್ತದೆ. ಈ ಸಹಾಯಧನವನ್ನು 10 ಕೋಟಿ ರೂಗಳಿಗೆ ಸೀಮಿತಗೊಳಿಸಲಾಗಿದೆ.
5. ದಿನಾಂಕ: 01.04.2008 ರಿಂದ 31.07.2008 ರವರೆಗೆ ಕಾರ್ಖಾನೆಗಳು ಪಾವತಿಸಬೇಕಾದ ಕಬ್ಬು ಖರೀದಿ ತೆರಿಗೆಯನ್ನು ಮನ್ನಾ ಮಾಡಲಾಗಿದೆ. (ಈ ಬಗ್ಗೆ ಆರ್ಥಿಕ ಇಲಾಖೆಯು ಪ್ರತ್ಯೇಕ ಅಧಿಸೂಚನೆ ಹೊರಡಿಸಲಿದೆ).
6. ಮೊಲಾಸಸ್ ಸಾಗಾಣಿಕೆಗೆ ವಿಧಿಸಲಾಗಿದ್ದ ನಿಯಂತ್ರಣವನ್ನು ಸಡಿಲಗೊಳಿಸಲಾಗಿದೆ. (ಈ ಬಗ್ಗೆ ಆರ್ಥಿಕ ಇಲಾಖೆ ಪ್ರತ್ಯೇಕ ಆದೇಶ ಹೊರಡಿಸಲಿದೆ.)

ಮೇಲ್ಕಂಡ ಸಹಾಯಧನ ಸೌಲಭ್ಯವು ಈ ಕೆಳಕಂಡ ನಿಬಂಧನೆ/ಮಾರ್ಗಸೂಚಿಗಳಿಗೆ ಒಳಪಟ್ಟಿರುತ್ತದೆ:

**ಸೌಲಭ್ಯ 2 :** ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಕಬ್ಬಿಗೆ ಸಂಬಂಧಿಸಿದಂತೆ, ಜಿಲ್ಲಾಧಿಕಾರಿಗಳು 01.04.08 ರಿಂದ 31.07.2008ರ ವರೆಗೆ ಕಾರ್ಖಾನೆಗಳು ಎಷ್ಟು ಪ್ರಮಾಣದ ಕಬ್ಬನ್ನು ನುರಿಸಿವೆ ಎಂಬುದನ್ನು ಖಚಿತಪಡಿಸಿ ಆಯುಕ್ತರು ಕಬ್ಬು ಅಭಿವೃದ್ಧಿರವರಿಗೆ ವರದಿ ಮಾಡಿ, ನಂತರ ಆಯುಕ್ತರು ಸರ್ಕಾರಕ್ಕೆ ಹಣ ಬಿಡುಗಡೆಗೆ ಕ್ರೋಢೀಕೃತ ಪ್ರಸ್ತಾವನೆ ಸಲ್ಲಿಸುವುದು.

**ಸೌಲಭ್ಯ 3 :** ಆದೇಶದ ದಿನಾಂಕದಿಂದ 2007–08ನೇ ಸಾಲಿನ ಹಂಗಾಮು ಮುಕ್ತಾಯಗೊಳ್ಳುವವರೆಗೆ ಕಾರ್ಖಾನೆಗಳು ಅವರ ವೆಚ್ಚದಲ್ಲಿ 30 ಕಿ.ಮೀಗಿಂತ ದೂರದಿಂದ ಕಬ್ಬನ್ನು ಸರಬರಾಜು ಮಾಡಿಕೊಂಡಿದ್ದಲ್ಲಿ, ಸಾಗಾಣಿಕೆ ಸಹಾಯಧನವನ್ನು ನೇರವಾಗಿ ಕಾರ್ಖಾನೆಗಳಿಗೆ ಪಾವತಿಸಲು ಹಾಗೂ ರೈತರ ಕಬ್ಬು ಬಾಕಿ ಬಿಲ್ಲಿನಿಂದ ಸಾಗಾಣಿಕೆ ವೆಚ್ಚವನ್ನು ಕಡಿತ ಮಾಡಿದ್ದಲ್ಲಿ ಮತ್ತು ರೈತರೇ ಕಾರ್ಖಾನೆಗಳಿಗೆ 50 ಕಿ.ಮೀ ಹೊರಗಿನಿಂದ ಕಬ್ಬನ್ನು ಸರಬರಾಜು ಮಾಡಿದ್ದಲ್ಲಿ, ಸಾಗಾಣಿಕೆ ಸಹಾಯಧನವನ್ನು ನೇರವಾಗಿ ರೈತರಿಗೆ ಪಾವತಿಸಲು ಜಿಲ್ಲಾಧಿಕಾರಿಗಳು ಕ್ರಮವಹಿಸುವುದು. ಹಾಗೂ ಇದಕ್ಕಾಗಿ ಬೇಕಾಗುವ ಹಣ ಬಿಡುಗಡೆಗೆ ಜಿಲ್ಲಾಧಿಕಾರಿಗಳು ಕಬ್ಬು ಅಭಿವೃದ್ಧಿ ಆಯುಕ್ತರ ಮೂಲಕ ಸರ್ಕಾರಕ್ಕೆ ಕ್ರೋಢೀಕೃತ ಪ್ರಸ್ತಾವನೆ ಸಲ್ಲಿಸುವುದು.

**ಸೌಲಭ್ಯ 4 :** ರಾಜ್ಯದ ಸಕ್ಕರೆ ಕಾರ್ಖಾನೆಗಳು ಈ ಆದೇಶ ಹೊರಡಿಸಿದ ದಿನಾಂಕದಿಂದ ರಫ್ತು ಮಾಡಿದ ಸಕ್ಕರೆಗೆ ರಫ್ತು ಸಹಾಯಧನ ಪಡೆಯಲು ಅರ್ಹವಿದ್ದು, ಈ ಸಹಾಯಧನವನ್ನು ರೈತರ ಕಬ್ಬು ಖರೀದಿ ಬಾಕಿ ಪಾವತಿಗಾಗಿ ಉಪಯೋಗಿಸುವುದು.

1) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರಿಗೆ ಸೂಕ್ತ ಪ್ರಾಧಿಕಾರದಿಂದ ಒದಗಿಸಿದ ರಫ್ತು ದಾಖಲಾತಿಗಳನ್ನು ಒದಗಿಸುವುದು. (Appropriate Authority – Joint Director General of Foreign

Trade and Chief Commissioner of Customs and Central Excise of the Port of Exit). ಈ ದಾಖಲಾತಿಗಳನ್ನು ಪರಿಶೀಲಿಸಿದ ನಂತರವೇ ಹಾಗೂ ಕಬ್ಬು ಬೆಳೆಗಾರರಿಗೆ ರಫ್ತಿನಿಂದ ಬಂದ ಹಣ ಪಾವತಿಯಾಗಿರುವುದನ್ನು ಖಚಿತ ಪಡಿಸಿಕೊಂಡ ನಂತರವೇ ಆಯುಕ್ತರು ಕಬ್ಬು ಅಭಿವೃದ್ಧಿ ರವರು ರಫ್ತು ಸಹಾಯಧನವನ್ನು ಸರ್ಕಾರದ ಅನುಮೋದನೆ ಪಡೆದು ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಕ್ರಮವಹಿಸುವುದು.

2) ಸಕ್ಕರೆ ರಫ್ತು ಪ್ರಮಾಣವನ್ನು ಎಲ್ಲಾ ಸಕ್ಕರೆ ಕಾರ್ಖಾನೆಗಳಿಂದ ಸೇರಿ 1.00 ಲಕ್ಷ ಟನ್‌ಗೆ ಸೀಮಿತಗೊಳಿಸಿದೆ. ಆಯುಕ್ತರು ಕಬ್ಬು ಅಭಿವೃದ್ಧಿ ರವರು ಆಯಾ ಕಾರ್ಖಾನೆಗಳಲ್ಲಿ ಇರುವ ಬಾಕಿಯನುಸಾರ ರಫ್ತು ಸಹಾಯಧನ ಪಡೆಯಬಹುದಾದ ಗರಿಷ್ಠ ಮಿತಿಯನ್ನು ನಿಗಧಿಪಡಿಸುವರು.

3) ರಾಜ್ಯ ಸರ್ಕಾರವು ನೀಡುವ ರಫ್ತು ಸಹಾಯಧನವು ಕೇಂದ್ರ ಸರ್ಕಾರವು ರಫ್ತು ಸಹಾಯಧನ ನೀಡುವ ಅವಧಿಯ ದಿನಾಂಕದವರೆಗೆ ಮಾತ್ರ ಜಾರಿಯಲ್ಲಿರುತ್ತದೆ.

4) ಈ ರಫ್ತು ಸಹಾಯಧನ ಮೇಲೆ ಹೇಳಿದ ನಿಬಂಧನೆಗಳಲ್ಲದೆ ಆಯುಕ್ತರು ಕಬ್ಬು ಅಭಿವೃದ್ಧಿರವರು ನಿಗಧಿ ಪಡಿಸುವ ಇತರೆ ನಿಬಂಧನೆಗಳಿಗೆ ಒಳಪಟ್ಟಿದೆ.

5) ರಫ್ತು ಸಹಾಯಧನ ಬಿಡುಗಡೆ ಮಾಡಿದ ನಂತರ ಆಯುಕ್ತರು ಬಳಕೆ ಪ್ರಮಾಣ ಪತ್ರವನ್ನು ಕಾರ್ಖಾನೆಗಳಿಂದ/ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದು.

ಜಿಲ್ಲಾಧಿಕಾರಿಗಳ ಹಾಗೂ ಕಬ್ಬು ಅಭಿವೃದ್ಧಿ ಆಯುಕ್ತರ ಶಿಫಾರಸ್ಸಿನನ್ವಯ ಕಾಲಕಾಲಕ್ಕೆ ಸಹಾಯಧನದ ಹಣವನ್ನು ಸರ್ಕಾರದಿಂದ ಬಿಡುಗಡೆ ಮಾಡಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 188 ವೆಚ್ಚ – 1/2008 ದಿನಾಂಕ: 29.02.08 ರಲ್ಲಿ ನೀಡಿದ ಸಹಮತಿಯಂತೆ ಹೊರಡಿಸಲಾಗಿದೆ

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 457

**ಪಿ. ಆನಂದ ಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ:** ಮೈಸೂರು ಸಕ್ಕರೆ ಕಾರ್ಖಾನೆ (ನಿ) ಇದರ ಪುನರುಜ್ಜೀವನಕ್ಕೆ ಸರ್ಕಾರದಿಂದ ಆರ್ಥಿಕ ನೆರವು– 2007–08ನೇ ಸಾಲಿಗೆ ದುಡಿಯುವ ಬಂಡವಾಳ ಮತ್ತು ಡಿಬೆಂಚರ್ ಹೋಲ್ಡರ್ಸ್‌ಗಳಿಗೆ ಬಡ್ಡಿ ಹಣ ಪಾವತಿಸಲು ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಐ 202 ಎಸ್‌ಜಿಎಫ್ 04 ದಿ: 06.05.05
2. ಸರ್ಕಾರದ ಆದೇಶ ಸಂಖ್ಯೆ: ಸಿಐ 153 ಎಸ್‌ಜಿಎಫ್ 05 ದಿ: 24.08.05.
3. ಸರ್ಕಾರದ ಆದೇಶ ಸಂಖ್ಯೆ: ಸಿಐ 202 ಎಸ್‌ಜಿಎಫ್ 04 (ಭಾ–3) ದಿ: 16.09.05.
4. ಸರ್ಕಾರದ ಆದೇಶ ಸಂಖ್ಯೆ: ಸಿಐ 34 ಎಸ್‌ಜಿಎಫ್ 05 ದಿ: 06.10.05.
5. ಸರ್ಕಾರದ ಆದೇಶ ಸಂಖ್ಯೆ: ಸಿಐ 34 ಎಸ್‌ಜಿಎಫ್ 05 ದಿ: 25.11.05.
6. ಸರ್ಕಾರದ ಆದೇಶ ಸಂಖ್ಯೆ: ಸಿಐ 110 ಎಸ್‌ಜಿಎಫ್ 05 ದಿ: 28.02.06.
7. ಸರ್ಕಾರದ ಆದೇಶ ಸಂಖ್ಯೆ: ಸಿಐ 34 ಎಸ್‌ಜಿಎಫ್ 05 ದಿ: 03.08.06.
8. ಸರ್ಕಾರದ ಆದೇಶ ಸಂಖ್ಯೆ: ಸಿಐ 34 ಎಸ್‌ಜಿಎಫ್ 05 ದಿ: 10.10.06.
9. ಸರ್ಕಾರದ ಆದೇಶ ಸಂಖ್ಯೆ: ಸಿಐ 34 ಎಸ್‌ಜಿಎಫ್ 05 ದಿ: 11.06.07.
10. ಸರ್ಕಾರದ ಆದೇಶ ಸಂಖ್ಯೆ: ಸಿಐ 119 ಎಸ್‌ಜಿಎಫ್ 07 ದಿ: 25.07.07.
11. ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ: ಎಂಎಸ್‌ಸಿಓ/08/ಎಂಡಿ/187 ದಿ: 16.01.08.

**ಪ್ರಸ್ತಾವನೆ:**

ಮೇಲೆ ಓದಲಾದ 1 ರಿಂದ 10 ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ, ಈ ಕಾರ್ಖಾನೆಗೆ 2005–06ನೇ ಸಾಲಿನಿಂದ 2007–08ನೇ ಸಾಲಿನಲ್ಲಿ ಈವರೆವಿಗೆ ಕಾರ್ಖಾನೆಯ ಕಬ್ಬು ಅರೆಯುವ ಚಟುವಟಿಕೆಗೆ ದುಡಿಯುವ ಬಂಡವಾಳ, ಸಹ ವಿದ್ಯುತ್ ಘಟಕದ ಪ್ರಾರಂಭಕ್ಕಾಗಿ ಕಾರ್ಮಿಕರ ಸ್ವಯಂ ನಿವೃತ್ತಿ ಸೌಲಭ್ಯಕ್ಕಾಗಿ ಹಾಗೂ ಡಿಬೆಂಚರ್ ಹೋಲ್ಡರ್ಸ್‌ಗಳಿಗೆ ಬಡ್ಡಿ ಹಣ ಪಾವತಿಸುವ ಸಲುವಾಗಿ ಒಟ್ಟು 7110.27/– ಲಕ್ಷ ರೂಗಳನ್ನು ಸಾಲವಾಗಿ ಸರ್ಕಾರವು ಬಿಡುಗಡೆ ಮಾಡಿದೆ.

ಮೇಲೆ ಓದಲಾದ (11)ರಲ್ಲಿರುವ ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ (ನಿ) ರವರ ಪತ್ರದಲ್ಲಿ ಕಾರ್ಖಾನೆಯನ್ನು ಪುನಃಶ್ಚೇತನಗೊಳಿಸುವ ಸಲುವಾಗಿ 2007–08ನೇ ಸಾಲಿಗೆ ಕಾರ್ಖಾನೆಯ ಕಬ್ಬು ಅರೆಯುವ ಕಾರ್ಯಕ್ಕಾಗಿ ಹಾಗೂ ಡಿಬೆಂಚರ್ ಹೋಲ್ಡರ್ಸ್‌ಗಳಿಗೆ ಬಡ್ಡಿ ಪಾವತಿಸುವ ಸಲುವಾಗಿ, ಡಿಸ್ಟಿಲರಿ ಆಧುನೀಕರಣಕ್ಕಾಗಿ, ಸಹವಿದ್ಯುತ್ ಘಟಕ ಸರಬರಾಜುದಾರರಿಗೆ ಹಣ ಪಾವತಿಸಲು ಮತ್ತು ಕ್ಯಾಪಿಟಲ್ ವರ್ಕ್ಸ್‌ಗಳಿಗಾಗಿ ಒಟ್ಟು 96.45 ಕೋಟಿ ರೂಗಳನ್ನು ಮಂಜೂರು ಮಾಡಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಕೂಲಂಕುಂಷವಾಗಿ ಪರಿಶೀಲಿಸಿ 2007–08ನೇ ಸಾಲಿನ ಕಬ್ಬು ಅರೆಯುವ ಕಾರ್ಯಕ್ರಮಗಳಿಗಾಗಿ 2.60 ಕೋಟಿ ರೂಗಳ (ಎರಡು ಕೋಟಿ ಆರವತ್ತು ಲಕ್ಷ ರೂಗಳು ಮಾತ್ರ) ದುಡಿಯುವ ಬಂಡವಾಳವನ್ನು ಮತ್ತು 2.40 (ಎರಡು ಕೋಟಿ ನಲವತ್ತು ಲಕ್ಷ ರೂಗಳು ಮಾತ್ರ) ಕೋಟಿ ರೂಗಳನ್ನು ಡಿಬೆಂಚರ್ ಹೋಲ್ಡರ್ಸ್‌ಗಳಿಗೆ ದಿನಾಂಕ: 31.03.08ರ ಅಂತ್ಯಕ್ಕೆ ಬಡ್ಡಿ ಹಣ ಪಾವತಿಸುವ ಸಲುವಾಗಿ ಒಟ್ಟು 5.00 ಕೋಟಿ ರೂಗಳನ್ನು (ಐದು ಕೋಟಿ ರೂಗಳು ಮಾತ್ರ) ಸಾಲವಾಗಿ ಬಿಡುಗಡೆಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 119 ಎಸ್‌ಜಿಎಫ್ 2007 ದಿನಾಂಕ: 04ನೇ ಫೆಬ್ರವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಗೆ 2007–08ನೇ ಸಾಲಿನ ಕಬ್ಬು ಅರೆಯುವ ಕಾರ್ಯಕ್ರಮಗಳನ್ನು ಮುಂದುವರೆಸುವ ಸಲುವಾಗಿ ದುಡಿಯುವ ಬಂಡವಾಳವಾಗಿ 2.60 ಕೋಟಿ ರೂಗಳನ್ನು (ಎರಡು ಕೋಟಿ ಆರವತ್ತು ಲಕ್ಷ ರೂಗಳು ಮಾತ್ರ) ಮತ್ತು 31.03.08ರ ಅಂತ್ಯಕ್ಕೆ ಡಿಬೆಂಚರ್ ಹೋಲ್ಡ್‌ರ್ಸ್‌ಗಳಿಗೆ ಬಡ್ಡಿ ಹಣ ಪಾವತಿಸುವ ಸಲುವಾಗಿ 2.40 ಕೋಟಿ ರೂಗಳನ್ನು (ಎರಡು ಕೋಟಿ ನಲವತ್ತು ಲಕ್ಷ ರೂಗಳು ಮಾತ್ರ) ಸೇರಿ ಒಟ್ಟು 5.00 ಕೋಟಿ ರೂಗಳನ್ನು (ಐದು ಕೋಟಿ ರೂಗಳು ಮಾತ್ರ) ಸಾಲವಾಗಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2007–08ನೇ ಸಾಲಿನ ಅನುದಾನದಲ್ಲಿ ಈ ಉದ್ದೇಶಕ್ಕಾಗಿ ಯಾವುದೇ ಹಣವನ್ನು ಒದಗಿಸಿರುವುದಿಲ್ಲ. ಈ ಹಣವನ್ನು ಲೆಕ್ಕ ಶೀರ್ಷಿಕೆ 6860–04–190–2–01–395 (ಯೋಜನೆ) ಸಾರ್ವಜನಿಕ ಉದ್ದಿಮೆಗಳಿಗೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಸಾಲಗಳು ಅಡಿಯಲ್ಲಿ ಹೆಚ್ಚುವರಿ ಅನುದಾನವಾಗಿ ಒದಗಿಸಿ 2007–08ನೇ ಸಾಲಿನ ಪೂರಕ ಅಂದಾಜುಗಳು–II ರಲ್ಲಿ ಮರುಹೊಂದಾಣಿಕೆ ಮೂಲಕ ಕ್ರಮಬದ್ಧಗೊಳಿಸಲು ತಿಳಿಸಿ ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಸದರಿ ಸಾಲದ ಹಣದ ಮರುಪಾವತಿ ಹಾಗೂ ಇನ್ನಿತರೇ ಅಂಶಗಳು, ಷರತ್ತು ಹಾಗೂ ನಿಬಂಧನೆಗಳ ಬಗ್ಗೆ ಪ್ರತ್ಯೇಕ ಆದೇಶವನ್ನು ನಂತರ ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 80 ಬಿಆರ್‌ಎಸ್ 2008 ದಿನಾಂಕ: 02.02.2008ರಲ್ಲಿ ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 120 ವೆಚ್ಚ–1/08 ದಿನಾಂಕ: 02.02.2008 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 217

**ಪಿ. ಆನಂದ ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ:** ಆಯುಕ್ತರು ಕಬ್ಬು ಅಭಿವೃದ್ಧಿ ಸಕ್ಕರೆ ನಿರ್ದೇಶನಾಲಯಕ್ಕೆ ಒಂದು ಹೊಸ ಕಾರು ಖರೀದಿಸಲು ಅನುಮತಿ ಮತ್ತು 2007–08ನೇ ಸಾಲಿಗೆ ಆಡಳಿತಾತ್ಮಕ ವೆಚ್ಚಗಳಿಗಾಗಿ ಹೆಚ್ಚುವರಿ ಅನುದಾನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಸಿಬ್ಬಂದಿ/151/2006–07 ದಿನಾಂಕ: 16.07.07, ಮತ್ತು ಅರೆ ಸರ್ಕಾರಿ ಪತ್ರ ಸಂಖ್ಯೆ: ಡಿಎಸ್‌ಕೆ/ಸಿಬ್ಬಂದಿ/151/2006–07, 01.10.07 ಮತ್ತು 17.11.07.

**ಪ್ರಸ್ತಾವನೆ**

2007–08ನೇ ಸಾಲಿನಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯಕ್ಕೆ ಆಯವ್ಯಯದಲ್ಲಿ ಆಡಳಿತಾತ್ಮಕ ವೆಚ್ಚಗಳಿಗಾಗಿ ಒದಗಿಸಲಾಗಿದ್ದ ಅನುದಾನದ ಮೊತ್ತವು ಸಂಪೂರ್ಣವಾಗಿ ವೆಚ್ಚವಾದ ಕಾರಣ ಸಂಭವನೀಯ ಇತರೆ ವೆಚ್ಚಗಳನ್ನು ಭರಿಸಲು ಹಣವಿಲ್ಲದೇ ಇದ್ದುದರಿಂದ ಸಾರಿಗೆ ಲೆಕ್ಕ ಶೀರ್ಷಿಕೆಯಡಿ ಲಭ್ಯವಿದ್ದ ರೂ. 1.00 ಲಕ್ಷ ಮೊತ್ತವನ್ನು

ಸಾಮಾನ್ಯ ಲೆಕ್ಕ ಶೀರ್ಷಿಕೆಗೆ ವರ್ಗೀಕರಿಸಿಕೊಂಡು ಬಾಕಿ ಬಿಲ್ಲುಗಳನ್ನು ಪಾವತಿಸಲಾಗಿರುವುದಾಗಿ ಹಾಗೂ ಆಯುಕ್ತರು ಉಪಯೋಗಿಸುತ್ತಿರುವ ಅಂಬಾಸಿಡರ್ ಕಾರು ಸಂಖ್ಯೆ: ಕೆಎ–01–ಜಿ–511 ಹಳೆಯದಾಗಿದ್ದು ಆಗಿಂದಾಗ್ಗೆ ದುರಸ್ಥಿಗೆ ಬರುತ್ತಿರುವುದರಿಂದ ಹೊಸ ಮಾರುತಿ ಎಸ್ಟೀಮ್ ಕಾರನ್ನು 5.69 ಲಕ್ಷ ರೂಗಳ ವೆಚ್ಚದಲ್ಲಿ ಖರೀದಿಸಲು ಪ್ರಸ್ತಾಪಿಸಿ ಈ ಕೆಳಕಂಡ ವೆಚ್ಚಗಳನ್ನು ಭರಿಸಲು ರೂ. 17.79 ಲಕ್ಷಗಳ ಹೆಚ್ಚುವರಿ ಅನುದಾನವನ್ನು 2007–08ನೇ ಸಾಲಿಗೆ ಮಂಜೂರು ಮಾಡುವಂತೆ ಮೇಲೆ ಓದಲಾದ ದಿನಾಂಕ: 16.07.07ರ ಪತ್ರದಲ್ಲಿ ಮತ್ತು 01.10.07 ಮತ್ತು 17.11.07ರ ಅರೆ ಸರ್ಕಾರಿ ಪತ್ರಗಳಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಕೋರಿರುತ್ತಾರೆ.

| ಕ್ರ.ಸಂ | ವಿವರಗಳು | ರೂ.ಲಕ್ಷಗಳಲ್ಲಿ |
|---|---|---|
| 1 | ಬಾಕಿ ಬಿಲ್ಲುಗಳು | 0.35 (NCC ಸ್ಟೇಷನರಿ ಬಾಬ್ತು) |
| 2 | ವಾಹನ ರಿಪೇರಿ ಬಾಕಿ | 1.12 |
| 3 | ವಾರ್ಷಿಕ ನಿರ್ವಹಣೆ | 0.21 |
| 4 | ಕಛೇರಿ ಸ್ಥಳಾಂತರಿಸುವಿಕೆ/ಕಛೇರಿ ಸಜ್ಜುಗೊಳಿಸುವಿಕೆಗಾಗಿ | 5.00 |
| 5 | ಆಯುಕ್ತರಿಗೆ ಹೊಸ ಕಾರು ಖರೀದಿಸುವಿಕೆಗಾಗಿ | 5.00 |
| 6 | ಆಡಳಿತ ವೆಚ್ಚಗಳಿಗಾಗಿ | 1.50 |
| | | 13.18 |
| 7 | ಪ್ರಯಾಣ ಭತ್ಯದ ಬಿಲ್ಲುಗಳು | 1.00 |
| 8 | ಕಟ್ಟಡದ ಬಾಡಿಗೆ | 2.96 |
| 9 | ಇತರೆ ವೆಚ್ಚಗಳು | 0.65 |
| | ಒಟ್ಟು ರೂ. | 17.79 |

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, 2007–08ನೇ ಸಾಲಿನ ಕಛೇರಿಯ ಸಂಭವನೀಯ ವೆಚ್ಚಗಳನ್ನು ಭರಿಸಲು ಹಣದ ಕೊರತೆಯಾಗಿರುವುದರಿಂದ ಅನುದಾನ ಒದಗಿಸುವ ಬಗ್ಗೆ ಹಾಗೂ ಆಯುಕ್ತರು ಕಬ್ಬು ಅಭಿವೃದ್ಧಿ ರವರು ಉಪಯೋಗಿಸುತ್ತಿರುವ ಅಂಬಾಸೆಡರ್ ಕಾರು ಸಂಖ್ಯೆ: ಕೆಎ–01–ಜಿ–511 ಈ ಕಾರು 1991ರಲ್ಲಿ ಖರೀದಿಸಿದ್ದು, 15 ವರ್ಷಕ್ಕಿಂತ ಹೆಚ್ಚಾಗಿದ್ದು, ಆಗಿಂದಾಗ್ಗೆ ದುರಸ್ಥಿಗೆ ಬರುತ್ತಿರುವುದರಿಂದ, ಆಡಳಿತಾತ್ಮಕ ಕೆಲಸ ಕಾರ್ಯಗಳಿಗೆ ಸಕಾಲಕ್ಕೆ ಹಾಜರಾಗಲು ತೊಂದರೆಯುಂಟಾಗಿರುವ ಹಿನ್ನಲೆಯಲ್ಲಿ, ಆಯುಕ್ತರ ಉಪಯೋಗಕ್ಕಾಗಿ ಒಂದು ಹೊಸ ಕಾರು ಖರೀದಿಗೆ ಅನುಮತಿ ನೀಡಲು ತೀರ್ಮಾನಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 269 ಎಸ್‌ಜಿಎಫ್ 07, ಬೆಂಗಳೂರು ದಿನಾಂಕ: 29ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯದಲ್ಲಿ ಇರುವ ಹಳೇಯ ಅಂಬಾಸಿಡರ್ ಕಾರು ಸಂಖ್ಯೆ: ಕೆಎ–01–ಜಿ–511ನ್ನು ನಿರುಪಯುಕ್ತಗೊಳಿಸುವ ಹಾಗೂ ಹಾಲಿ ಸರ್ಕಾರದ ನಿಯಮಗಳನ್ನು ಪಾಲಿಸುವ ಷರತ್ತಿಗೊಳಪಟ್ಟು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯಕ್ಕೆ ಒಂದು ಹೊಸ ಕಾರು ಖರೀದಿಸಲು ಹಾಗೂ ಕಛೇರಿಯ ಆಡಳಿತಾತ್ಮಕ ವೆಚ್ಚಗಳಿಗಾಗಿ ಒಟ್ಟು ರೂ. 8.00 ಲಕ್ಷ ರೂಗಳನ್ನು (ಎಂಟು ಲಕ್ಷ ರೂಗಳು ಮಾತ್ರ) 2007–08ನೇ ಸಾಲಿಗೆ ಹೆಚ್ಚುವರಿ ಅನುದಾನವಾಗಿ ಮಂಜೂರು ಮಾಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2852–08–201–0–01 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 284 ಬಿಆರ್‌ಎಸ್ 07 ದಿನಾಂಕ: 28.12.07ರಲ್ಲಿ ಹಾಗೂ ಟಿಪ್ಪಣಿ ಸಂಖ್ಯೆ: ಎಫ್‌ಡಿ/1825/EXP-1/07 ದಿನಾಂಕ: 29.12.07 ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 216

**ಪಿ. ಆನಂದ ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ:** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ಸಕ್ಕರೆ ವರ್ಷ 2006–07ರ ಸಾಲಿಗೆ ವಿಶೇಷ ನೆರವು.

**ಓದಲಾಗಿದೆ:** 1) ದಿನಾಂಕ 12.04.2007ರಂದು ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ತೀರ್ಮಾನಗಳು.

2) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 13.06.07.
3) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 12.09.07
4) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2 (2)) ದಿನಾಂಕ: 19.10.07
5) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2 (3)) ದಿನಾಂಕ: 02.11.2007.
6) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–02 (4)) ದಿನಾಂಕ: 01.01.08.
7) ಸರ್ಕಾರದ ಆದೇಶ ಸಂಖ್ಯೆ ಸಿಐ 58 ಎಸ್‌ಜಿಎಫ್ 2007 (ಭಾ–2) (6) ಬೆಂಗಳೂರು ದಿನಾಂಕ 22.02.2008.
8) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) (7) ದಿನಾಂಕ: 20.03.08.
9) ಕಬ್ಬು ಅಭಿವೃದ್ಧಿ ಆಯುಕ್ತರ ಪತ್ರ ಸಂ: ಡಿಎಸ್‌ಕೆ/ಎಸ್‌ಟಿಟಿ/13/2007–08 ದಿನಾಂಕ 22.01.2008.
10) ಆಯುಕ್ತರು ಕಬ್ಬು ಅಭಿವೃದ್ದಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ ಎಸ್‌ಟಿಟಿ/02/2007 ದಿನಾಂಕ: 14.08.07.
11) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08 (ಭಾ–2) ದಿನಾಂಕ 12–3–2008.

**ಪ್ರಸ್ತಾವನೆ:**

ಮೇಲೆ ಓದಲಾದ (2) ರಿಂದ (6) ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಸಾಗಾಣಿಕೆ ಸಹಾಯಧನ, ರೂ.3,62,18,916/– ರೈತರಿಗೆ ಪರಿಹಾರ ಧನ ರೂ. 25,00,00,000/- ಮತ್ತು ಕಾರ್ಖಾನೆಗಳಿಗೆ ಸಹಾಯಧನ 21,13,92.000/- ರೂಗಳು ಸೇರಿ ಒಟ್ಟು 49,76,10,916/– ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (9) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ದಿ ರವರ ಪತ್ರದಲ್ಲಿ ಬಿಜಾಪುರ, ಬಾಗಲಕೋಟೆ, ಚಾಮರಾಜನಗರ, ಹಾವೇರಿ ಈ ಜಿಲ್ಲೆಗಳಲ್ಲಿನ ಕಬ್ಬು ಬೆಳೆದ ರೈತರಿಗೆ ದಿನಾಂಕ: 31.05.07 ರಂದು 12 ತಿಂಗಳು ಪೂರೈಸಿ, ಪಕ್ವವಾದ ನೋಂದಾಯಿತವಲ್ಲದ, ಕಟಾವಾಗದೇ ಜಮೀನಿನಲ್ಲಿ ಉಳಿದಿದ್ದು, ನಂತರ ಕಾರ್ಖಾನೆಗಳಲ್ಲಿ ನುರಿಸದೇ ನಷ್ಟವಾದ ಕಬ್ಬಿನ ಬೆಳೆಗೆ ಪ್ರತಿ ಹೆಕ್ಟೇರ್‌ಗೆ 25.000/– ರೂಗಳ ಪರಿಹಾರಧನದಂತೆ ಒಟ್ಟು 14,89.11.000/– ರೂಗಳನ್ನು ದಿನಾಂಕ: 13.06.07ರ ಆದೇಶದ ಪ್ರಕಾರ ಹೆಚ್ಚುವರಿಯಾಗಿ ಬಿಡುಗಡೆ ಮಾಡಲು ಕೋರಿದ್ದಾರೆ.

ಮೇಲೆ ಓದಲಾದ (10) ರಲ್ಲಿರುವ ದಿನಾಂಕ: 14.08.07ರ ಪತ್ರದಲ್ಲಿ ವಿಸ್ತರಿಸಿದ ಅವಧಿಯಾದ ದಿನಾಂಕ: 31.05.07ರ ನಂತರವು ಅಂದರೆ ದಿನಾಂಕ: 01.06.07 ರಿಂದ ದಿನಾಂಕ: 31.07.07 ರವರೆಗೆ ರಾಜ್ಯದ 25 ಸಕ್ಕರೆ ಕಾರ್ಖಾನೆಗಳು ಕಬ್ಬು ನುರಿಸಿದ್ದು, ಈ ಕಾರ್ಖಾನೆಗಳು ನುರಿಸಿದ ಕಬ್ಬಿಗೆ ಪ್ರತಿ ಟನ್‌ಗೆ ರೂ.100 ರಂತೆ ಒಟ್ಟು 8.75 ಕೋಟಿ ರೂಗಳನ್ನು ಸಹಾಯಧನವಾಗಿ ನೀಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದಾರೆ.

ಮೇಲೆ ಓದಲಾದ (9) ರಲ್ಲಿರುವ ದಿನಾಂಕ 22.01.2008ರ ಪತ್ರದಲ್ಲಿ ಆಯುಕ್ತರು 14,89,11.000/– ರೂಗಳನ್ನು ರೈತರಿಗೆ ಪರಿಹಾರಧನವಾಗಿ ಬಿಡುಗಡೆ ಮಾಡಲು ಪ್ರಸ್ತಾಪಿಸಿದ್ದು, ಈಗಾಗಲೇ ಮೇಲೆ ಓದಲಾದ (7) ಮತ್ತು (8) ರಲ್ಲಿರುವ ಆದೇಶಗಳಲ್ಲಿ ಬಿಜಾಪುರ, ಬಾಗಲಕೋಟೆ, ಚಾಮರಾಜನಗರ, ಹಾವೇರಿ ಜಿಲ್ಲೆಗಳ ಕಬ್ಬು ಬೆಳೆಗಾರ ರೈತರಿಗೆ 13,64.00.000/– ರೂಗಳನ್ನು ರೈತರಿಗೆ ಪರಿಹಾರಧನವಾಗಿ ಬಿಡುಗಡೆ ಮಾಡಲಾಗಿದೆ. ಬಾಕಿ ಉಳಿದಂತೆ ಬಿಜಾಪುರ ಜಿಲ್ಲೆಗೆ 45,19.000/– ರೂಗಳು ಮತ್ತು ಬಾಗಲಕೋಟೆ ಜಿಲ್ಲೆಗೆ 79,92.000/– ರೂಗಳನ್ನು ಬಿಡುಗಡೆ ಮಾಡಬೇಕಾಗಿದ್ದು, ಹಾಗೂ ಮೇಲೆ ಓದಲಾದ (10)ರಲ್ಲಿರುವ ಪತ್ರದಲ್ಲಿ ಪ್ರಸ್ತಾಪಿಸಿರುವಂತೆ ದಿನಾಂಕ: 01.06.07 ರಿಂದ 31.07.07 ರವರೆಗೆ ರಾಜ್ಯದ 25 ಸಕ್ಕರೆ ಕಾರ್ಖಾನೆಗಳು ವಿಸ್ತರಿಸಿದ ಅವಧಿಯ ನಂತರವು ಕಬ್ಬು ನುರಿಸಿದ್ದು, ಈ ಕಾರ್ಖಾನೆಗಳಿಗೆ ನುರಿಸಿದ ಪ್ರತಿ ಟನ್ ಕಬ್ಬಿಗೆ ರೂ.100 ರಂತೆ 8,74,92.000/– ರೂಗಳ ಸಹಾಯಧನವನ್ನು ಬಿಡುಗಡೆ ಮಾಡಬೇಕಾಗಿದ್ದು, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಐ 58 ಎಸ್‌ಜಿಎಫ್ 2007 (ಭಾ–2) (8) ಬೆಂಗಳೂರು ದಿನಾಂಕ : 25ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಕ್ಕರೆ ವರ್ಷ 2006–07ಕ್ಕೆ ಸಂಬಂಧಿಸಿದಂತೆ ಕಬ್ಬು ಬೆಳೆಗಾರರ ನಷ್ಟ ಭರಿಸುವ ದೃಷ್ಟಿಯಿಂದ ಕಟಾವಾಗದೇ ಜಮೀನಿನಲ್ಲಿ ಉಳಿದಂತಹ 12 ತಿಂಗಳು ಪೂರೈಸಿ ಪಕ್ವವಾದ ಕಬ್ಬಿಗೆ ಪ್ರತಿ ಹೇಕ್ಟೇರ್‌ಗೆ 25.000/– ರೂಗಳಂತೆ ಅರ್ಹ ರೈತರಿಗೆ ಪಾವತಿಸುವ ಸಲುವಾಗಿ ಬಿಜಾಪುರ ಜಿಲ್ಲೆಗೆ 45,19.000/– ರೂಗಳು, ಬಾಗಲಕೋಟೆ ಜಿಲ್ಲೆಗೆ 79,92.000/– ರೂಗಳು ಸೇರಿ ಒಟ್ಟು 1,25,11.000/– ರೂಗಳ (ಒಂದು ಕೋಟಿ ಇಪ್ಪತ್ತೈದು ಲಕ್ಷ ಹನ್ನೊಂದು ಸಾವಿರ ರೂಗಳು ಮಾತ್ರ) ಪರಿಹಾರಧನವನ್ನು ಬಿಜಾಪುರ, ಬಾಗಲಕೋಟೆ, ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಹಾಗೂ ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ವಿಸ್ತರಿಸಿದ ಅವಧಿಯ ನಂತರವು ಅಂದರೆ ದಿನಾಂಕ: 01.06.07 ರಿಂದ 31.07.07 ರವರೆಗೆ ನುರಿಸಿದ ಪ್ರತಿ ಟನ್ ಕಬ್ಬಿಗೆ 100/– ರೂಗಳ ಸಹಾಯಧನವನ್ನು ಈ ಆದೇಶದ ಅನುಬಂಧದಲ್ಲಿ

ನಮೂದಿಸಿರುವ 25 ಸಕ್ಕರೆ ಕಾರ್ಖಾನೆಗಳಿಗೆ ನೀಡುವ ಸಲುವಾಗಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ 8,74,92.000/– ರೂಗಳು (ರೂ ಎಂಟು ಕೋಟಿ ಎಪ್ಪತ್ತಾನಾಲ್ಕು ಲಕ್ಷ ತ್ತೊಂಬತ್ತೆರಡು ಸಾವಿರ ರೂಪಾಯಿಗಳು ಮಾತ್ರ) ಸೇರಿ ಒಟ್ಟು 10,00,03.000/– ರೂಗಳನ್ನು (ರೂ ಹತ್ತು ಕೋಟಿ ಮೂರು ಸಾವಿರ ರೂಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2007–08ನೇ ಸಾಲಿನ ಆಯವ್ಯಯದಲ್ಲಿ ಯಾವುದೇ ಹಣವನ್ನು ಈ ಉದ್ದೇಶಕ್ಕಾಗಿ ನಿಗಧಿಪಡಿಸಿಲ್ಲವಾದ ಕಾರಣ ಈ ಹಣವನ್ನು 2007–08ನೇ ಸಾಲಿನ ಪೂರಕ ಅಂದಾಜುಗಳು (SE-II 2007-08) (ಎರಡನೇ ಹಾಗೂ ಅಂತಿಮ ಕಂತು) ಮೂಲಕ ಹೆಚ್ಚುವರಿ ಅನುದಾನವಾಗಿ ಒದಗಿಸಲಾಗಿದ್ದು, ಲೆಕ್ಕ ಶೀರ್ಷಿಕೆ "2852–08–201–0–07 (ಯೋಜನೆ) 106 ಸಹಾಯಧನ" ಅಡಿಯಲ್ಲಿ ಬಿಡುಗಡೆ ಮಾಡಲಾಗಿದೆ.

ಆಯುಕ್ತರು ಕಬ್ಬು ಅಬಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಹಣವನ್ನು ಸರ್ಕಾರದ ಆದೇಶ ದಿನಾಂಕ: 13.06.07ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ ಹಾಗೂ ಈ ಕೆಳಕಂಡ ಷರತ್ತಿಗೊಳಪಟ್ಟು, ಅರ್ಹ ಕಬ್ಬು ಬೆಳೆಗಾರ ರೈತರಿಗೆ ಮತ್ತು ಸಂಬಂಧಪಟ್ಟ ಸಕ್ಕರೆ ಕಾರ್ಖಾನೆಗಳಿಗೆ ಜಿಲ್ಲಾಧಿಕಾರಿಗಳ ಮುಖಾಂತರ ಬಿಡುಗಡೆ ಮಾಡಲು ಕ್ರಮವಹಿಸತಕ್ಕದು. ಜಿಲ್ಲಾಧಿಕಾರಿಗಳು ಈ ಕೆಳಕಂಡ ಷರತ್ತುಗಳನ್ವಯ ಪರಿಹಾರಧನ/ಸಹಾಯಧನವನ್ನು ಪಾವತಿ ಮಾಡತಕ್ಕದು.

1. ದಿನಾಂಕ 31.05.2007ಕ್ಕೆ 12 ತಿಂಗಳು ಪೂರೈಸಿ ಪಕ್ವವಾದ, ಸಕ್ಕರೆ ಕಾರ್ಖಾನೆಯಲ್ಲಿ ನುರಿಸದೇ ಜಮೀನಿನಲ್ಲಿ ಉಳಿದ ನೋಂದಾಯಿತವಲ್ಲದ ಕಬ್ಬಿಗೆ ಮಾತ್ರ ಪ್ರತಿ ಹೆಕ್ಟೇರ್‌ಗೆ ರೂ.25000/–ಗಳ ಪರಿಹಾರಧನವನ್ನು ಪಾವತಿಸತಕ್ಕದ್ದು,
2. ಪ್ರತಿ ಕ್ಲೇಮ್‌ಗಳ ಬಗ್ಗೆ ಮಹಜರ್ ಹಾಗೂ ಫೋಟೋಗಳನ್ನು ಕಡ್ಡಾಯವಾಗಿ ಕಡತದಲ್ಲಿ ಇಡತಕ್ಕದ್ದು. ಫೋಟೊಗಳನ್ನು ಕೃಷಿ ಇಲಾಖೆಯ ಅಧಿಕಾರಿಗಳು ದಿನಾಂಕ 31.05.2007ರಂದು 12 ತಿಂಗಳು ಪೂರೈಸಿ ಪಕ್ವವಾಗಿದೆ ಎಂದು ದೃಡೀಕರಿಸತಕ್ಕದ್ದು.
3. ಜಮೀನಿಗೆ ಸಂಬಂಧಿಸಿದಂತೆ ಕಂದಾಯ ಇಲಾಖೆಯು ನೀಡಿದ ಆರ್.ಟಿ.ಸಿ. ಪ್ರತಿಯನ್ನು ಕಡತದಲ್ಲಿ ಇಡತಕ್ಕದ್ದು.
4. ಮೇಲಿನ ಕ್ಲೇಮ್‌ಗಳು ಜಿಲ್ಲಾಧಿಕಾರಿಗಳಿಂದ ರಚಿಸಲ್ಪಟ್ಟ ತಂಡದವರಿಂದ ಶಿಫಾರಸ್ಸು ಆಗಿರತಕ್ಕದ್ದು. ಮಹಜರ್‌ಗಳನ್ನು ಸರಿಯಾಗಿ ಮಹಜರ್ ಮಾಡಿದ ದಿನಾಂಕ ಹಾಗೂ ದಿನಾಂಕ 31.05.2007ರಂದು 12 ತಿಂಗಳು ಪೂರೈಸಿದ ಬಗ್ಗೆ ದೃಢೀಕರಣವನ್ನು ಕಂದಾಯ ಇಲಾಖೆಯ ಅಧಿಕಾರಿಗಳಿಂದ ಮಾಡಿಸತಕ್ಕದ್ದು.
5. ಫಲಾನುಭವಿಗಳ ಪಟ್ಟಿಯನ್ನು ಸಂಬಂಧಿಸಿದ ಗ್ರಾಮ ಪಂಚಾಯಿತಿಗಳ ನೋಟೀಸ್ ಬೋರ್ಡ್‌ನ ಮೇಲೆ ಸಾರ್ವಜನಿಕರ ಮಾಹಿತಿಗಾಗಿ ಪ್ರಚುರಪಡಿಸತಕ್ಕದ್ದು.
6. ಈ ರೀತಿ ಬಿಡುಗಡೆ ಮಾಡಲಾಗುವ ಆರ್ಥಿಕ ನೆರವು ಯಾವುದೇ ರೀತಿಯಲ್ಲೂ ದುರುಪಯೋಗವಾಗದಂತೆ ಹಾಗೂ ಅರ್ಹವಿರುವ ರೈತರಿಗೆ ಮಾತ್ರ ಅಗತ್ಯವಿರುವ ದಾಖಲಾತಿಗಳನ್ನು ಪಡೆದ ನಂತರವೇ ವಿತರಿಸುವಂತೆ ಜಿಲ್ಲಾಧಿಕಾರಿಗಳು ಜಾಗ್ರತೆ ವಹಿಸತಕ್ಕದ್ದು.

**ಕಾರ್ಖಾನೆಗಳಗೆ ಸಹಾಯಧನ**

1. 2006–07ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ನಿಗಧಿ ಪಡಿಸಿದ ಕನಿಷ್ಠ ಕಬ್ಬಿನ ದರವನ್ನು ಪಾವತಿಸಿರುವ ಕಾರ್ಖಾನೆಗಳಿಗೆ ಪಾವತಿಸಬೇಕು.
2. 2006–07ನೇ ಸಾಲಿನಲ್ಲಿ ರೈತರ ಬಾಕಿ ಇದ್ದರೆ ಮೊಬಲಗನ್ನು ನೇರವಾಗಿ ರೈತರಿಗೆ ಜಿಲ್ಲಾಧಿಕಾರಿಗಳು ಸಕ್ಕರೆ ಕಾರ್ಖಾನೆಗಳಿಂದ ರೈತರ ಬಾಕಿ ಪಟ್ಟಿ ಪಡೆದು ಪಾವತಿಸಬೇಕು.
3. ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿ ರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡತಕ್ಕದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 441 ವೆಚ್ಚ–1/08 ದಿನಾಂಕ:20.03.2008ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಆನಂದ ಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 07 (ಭಾ–2) (8) ದಿನಾಂಕ: 25.03.2008ಕ್ಕೆ
ಸಂಬಂಧಿಸಿದ ಅನುಬಂಧ

ದಿನಾಂಕ: 01.06.07 ರಿಂದ 31.07.07ರ ವಿಸ್ತರಿಸಿದ ಅವಧಿಯ ನಂತರವು ಕಾರ್ಖಾನೆಗಳು ನುರಿಸಿದ ಪ್ರತಿ ಟನ್ ಕಬ್ಬಿಗೆ 100/– ರೂಗಳ ಸಹಾಯಧನ

(ಲಕ್ಷ ರೂಗಳಲ್ಲಿ)

| ಕ್ರ.ಸ | ಸಕ್ಕರೆ ಕಾರ್ಖಾನೆಯ ಹೆಸರು | ಕಾರ್ಖಾನೆಯ ಸಾಮರ್ಥ್ಯ (ಟಿ.ಸಿ.ಡಿ) | ಮುಕ್ತಾಯದ ದಿನಾಂಕ | ಕಬ್ಬು ನುರಿಸಿದ ಪ್ರಮಾಣ (ಮೆ.ಟನ್‌ಗಳಲ್ಲಿ) | ಪ್ರತಿ ಟನ್‌ಗೆ ರೂ.100 ರಂತೆ ಕೊಡಬೇಕಾದ ಹಣ | ಸಂಬಂಧಿಸಿದ ಜಿಲ್ಲಾಧಿಕಾರಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಮೈಸೂರು ಸಕ್ಕರೆ ಕಂಪೆನಿ (ನಿ) | 5000 | 08.06.2007 | 8.699 | 8.69 | ಮಂಡ್ಯ |
| 2 | ಬೀದರ್ ಸ.ಸ.ಕಾ. (ನಿ) | 3500 | 14.06.2007 | 20.686 | 20.28 | ಬೀದರ್ |
| 3 | ಘಟಪ್ರಭಾ ಸ.ಸ.ಕಾ | 2200 | 09.06.2007 | 13.916 | 13.91 | ಬೆಳಗಾಂ |
| 4 | ಹಿರಣ್ಯಕೇಶಿ ಸ.ಸ.ಕಾ | 5000 | 09.06.2007 | 15.908 | 15.90 | ಬೆಳಗಾಂ |
| 5 | ಹೇಮಾವತಿ ಸ.ಸ.ಕಾ | 1250 | 09.06.2007 | 5.035 | 5.03 | ಹಾಸನ |
| 6 | ಮಹಾತ್ಮಾಗಾಂಧಿ ಸ.ಸ.ಕಾ | 2500 | 12.06.2007 | 13.877 | 13.87 | ಬೀದರ್ |
| 7 | ನಾರಂಜಾ ಸ.ಸ.ಕಾ (ನಿ) | 2500 | 17.06.2007 | 29.253 | 29.25 | ಬೀದರ್ |
| 8 | ರೈತರಾ ಸ.ಸ.ಕಾ (ನಿ) | 2500 | 09.06.2007 | 13.588 | 13.58 | ಬಾಗಲಕೋಟೆ |
| 9 | ನಂದಿ ಸ.ಸ.ಕಾ | 2500 | 13.07.2007 | 86.342 | 86.34 | ಬಿಜಾಪುರ |
| 10 | ಬನ್ನಾರಿಅಮ್ಮನ್ ಶುಗರ್ಸ್ (ಲಿ) | 5000 | 15.06.2007 | 55.112 | 55.11 | ಮೈಸೂರು |
| 11 | ಬೀಳಗಿ ಶುಗರ್ಸ್ | 2500 | 20.06.2007 | 26.823 | 26.82 | ಬಾಗಲಕೋಟೆ |
| 12 | ಚಾಮುಂಡೇಶ್ವರಿ ಶುಗರ್ಸ್ | 4000 | 29.06.2007 | 69.103 | 69.10 | ಮಂಡ್ಯ |
| 13 | ಧ್ಯಾನಯೋಗಿ ಶುಗರ್ಸ್ | 1750 | 25.06.2007 | 21.970 | 21.97 | ಬಿಜಾಪುರ |
| 14 | ಜೆಮ್ ಶುಗರ್ಸ್ | 2500 | 13.06.2007 | 30.411 | 30.41 | ಬಾಗಲಕೋಟೆ |
| 15 | ಗೋದಾವರಿ ಶುಗರ್ಸ್ | 7500 | 08.06.2007 | 50.021 | 50.02 | ಬಾಗಲಕೋಟೆ |
| 16 | ನಿರಾಣಿ ಶುಗರ್ಸ್ | 1250 | 05.06.2007 | 2.256 | 2.25 | ಬಾಗಲಕೋಟೆ |
| 17 | ಪ್ರಭುಲಿಂಗೇಶ್ವರ ಶುಗರ್ಸ್ | 3500 | 17.06.2007 | 48.405 | 48.40 | ಬಾಗಲಕೋಟೆ |
| 18 | ಸತೀಶ್ ಶುಗರ್ಸ್ | 1250 | 02.06.2007 | 1.402 | 1.40 | ಬೆಳಗಾಂ |
| 19 | ಎಸ್.ಸಿ.ಎಂ.ಶುಗರ್ಸ್ | 3500 | 26.06.2007 | 89.115 | 89.11 | ಮಂಡ್ಯ |
| 20 | ಉಗಾರ್ ಶುಗರ್ಸ್ | 10000 | 01.06.2007 | 1.981 | 1.98 | ಬೆಳಗಾಂ |
| 21 | ವಿಶ್ವನಾಥ ಶುಗರ್ಸ್ | 2500 | 15.06.2007 | 67.925 | 67.92 | ಬೆಳಗಾಂ |
| 22 | ಎಸ್.ಪಿ.ಆರ್.ಶುಗರ್ಸ್ | 2500 | 16.06.2007 | 6.989 | 6.98 | ರಾಮನಗರ |
| 23 | ಐ.ಎಸ್.ಆರ್.ಶುಗರ್ಸ್ | 2500 | 31.07.2007 | 1.00.058 | 100.05 | ಮಂಡ್ಯ |
| 24 | ಮಹೇಶ್ವರ ಶುಗರ್ಸ್ | 2500 | 17.07.2007 | 88.349 | 88.34 | ಚಾಮರಾಜನಗರ |
| 25 | ರೇಣುಕಾ ಶುಗರ್ಸ್, ಮನೋಳಿ | 2500 | 04.06.2007 | 8.210 | 8.21 | ಬೆಳಗಾಂ |
| | ಒಟ್ಟು | 82200 | | 8.75.034 | 874.92 | |

ಪಿ. ಆನಂದ ಕುಮಾರ್
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 535

**ವಿಷಯ:** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು.

**ಓದಲಾಗಿದೆ:** 1) ದಿನಾಂಕ 12.04.2007ರಂದು ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ತೀರ್ಮಾನಗಳು.

2) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 13.06.07.
3) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 12.09.07
4) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2 (2)) ದಿನಾಂಕ: 19.10.07
5) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2 (3)) ದಿನಾಂಕ: 02.11.2007.
6) ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–02 (4)) ದಿನಾಂಕ: 01.01.08.
7) ಸರ್ಕಾರದ ಆದೇಶ ಸಂಖ್ಯೆ ಸಿಐ 58 ಎಸ್‌ಜಿಎಫ್ 2007 (ಭಾ–2) (6) ಬೆಂಗಳೂರು ದಿನಾಂಕ 22.02.2008.
8) ಕಬ್ಬು ಅಭಿವೃದ್ಧಿ ಆಯುಕ್ತರ ಪತ್ರ ಸಂ: ಡಿಎಸ್‌ಕೆ/ಎಸ್‌ಟಿಟಿ/13/2007–08 ದಿನಾಂಕ 22.01.2008.
9) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08 (ಭಾ–2) ದಿನಾಂಕ: 12.03.2008

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ 2 ರಿಂದ 6 ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಸಾಗಾಣಿಕೆ ಸಹಾಯಧನ, ರೂ.3,62,18,916/– ರೈತರಿಗೆ ಪರಿಹಾರ ಧನ ರೂ. 25,00,00,000/– ಮತ್ತು ಕಾರ್ಖಾನೆಗಳಿಗೆ ಸಹಾಯಧನ 21,13,92.000/– ರೂಗಳು ಸೇರಿ ಒಟ್ಟು 49,76,10,916/–ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (8) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ದಿ ರವರ ಪತ್ರದಲ್ಲಿ ಬಿಜಾಪುರ, ಬಾಗಲಕೋಟೆ, ಚಾಮರಾಜನಗರ, ಹಾವೇರಿ ಈ ಜಿಲ್ಲೆಗಳಲ್ಲಿನ ಕಬ್ಬು ಬೆಳೆದ ರೈತರಿಗೆ ದಿನಾಂಕ: 31.05.07 ರಂದು 12 ತಿಂಗಳು ಪೂರೈಸಿ, ಪಕ್ವವಾದ ನೋಂದಾಯಿತವಲ್ಲದ, ಕಟಾವಾಗದೇ ಜಮೀನಿನಲ್ಲಿ ಉಳಿದಿದ್ದು, ನಂತರ ಕಾರ್ಖಾನೆಗಳಲ್ಲಿ ನುರಿಸದೇ ನಷ್ಟವಾದ ಕಬ್ಬಿನ ಬೆಳೆಗೆ ಪ್ರತಿ ಹೆಕ್ಟೇರ್‌ಗೆ 25.000 ರೂಗಳ ಪರಿಹಾರಧನದಂತೆ ಒಟ್ಟು 14,89.11.000 ರೂಗಳನ್ನು ದಿನಾಂಕ: 13.06.07ರ ಆದೇಶದ ಪ್ರಕಾರ ಹೆಚ್ಚುವರಿಯಾಗಿ ಬಿಡುಗಡೆ ಮಾಡಲು ಕೋರಿದ್ದಾರೆ.

ಮೇಲೆ ಓದಲಾದ (7) ರಲ್ಲಿರುವ ದಿನಾಂಕ 22.02.2008ರ ಅದೇಶದಲ್ಲಿ ಬಿಜಾಪುರ, ಬಾಗಲಕೋಟೆ, ಚಾಮರಾಜನಗರ ಜಿಲ್ಲೆಗಳ ಕಬ್ಬು ಬೆಳೆಗಾರ ರೈತರಿಗೆ ಪರಿಹಾರ ಧನವಾಗಿ ಭಾಗಶಃ 7 ಕೋಟಿ ರೂಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (2) ರಲ್ಲಿರುವ ದಿನಾಂಕ: 13.06.07ರ ಆದೇಶದಲ್ಲಿ 12 ತಿಂಗಳು ಪೂರೈಸಿ ಪಕ್ವವಾದ ಹಾಗೂ ಕಟಾವಾಗದೇ ಜಮೀನಿನಲ್ಲಿ ಉಳಿದಿರುವ ಕಬ್ಬಿಗೆ ರೈತರಿಗೆ ಪ್ರತಿ ಹೆಕ್ಟೇರ್‌ಗೆ 25,000 ರೂಗಳ ಸಹಾಯಧನವನ್ನು ಒಟ್ಟಾರೆ 10,000 ಹೆಕ್ಟೇರ್‌ಗೆ ಸೀಮೀತಗೊಳಿಸಿದ್ದು, ರೈತರಿಗೆ ನೀಡಬೇಕಾದ ಪರಿಹಾರಧನಕ್ಕೆ ಮತ್ತಷ್ಟು ಬೇಡಿಕೆ ಬಂದಿದ್ದು, ದಿನಾಂಕ: 13.06.07ರ ಆದೇಶದಲ್ಲಿ ವಿಧಿಸಲಾಗಿರುವ ನಿರ್ಭಂಧವನ್ನು ಮೇಲೆ ಓದಲಾದ (9)ರಲ್ಲಿರುವ ದಿನಾಂಕ:12.03.2008ರ ಆದೇಶದಲ್ಲಿ ಸಡಿಲಿಸಲಾಗಿದೆ.

ಮೇಲೆ ಓದಲಾದ (7) ರಲ್ಲಿರುವ ದಿನಾಂಕ: 22.02.08ರ ಆದೇಶದಲ್ಲಿ ಬಿಜಾಪುರ ಜಿಲ್ಲೆಗೆ 5.00 ಕೋಟಿ, ಬಾಗಲಕೋಟೆ ಜಿಲ್ಲೆಗೆ 1.00 ಕೋಟಿ ಮತ್ತು ಚಾಮರಾಜನಗರ ಜಿಲ್ಲೆಗೆ 1.00 ಕೋಟಿ ರೂಗಳನ್ನು ಭಾಗಶಃ ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (9) ರಲ್ಲಿರುವ ದಿನಾಂಕ:12.03.2008ರ ಆದೇಶದಲ್ಲಿ ನಿರ್ಬಂಧವನ್ನು ಸಡಿಲಿಸಲಾಗಿರುವುದರಿಂದ ಬಿಜಾಪುರ, ಬಾಗಲಕೋಟೆ, ಚಾಮರಾಜನಗರ, ಹಾವೇರಿ ಜಿಲ್ಲೆಗಳಿಗೆ ಬಾಕಿ ಉಳಿದ ಪರಿಹಾರಧನವನ್ನು ಬಿಡುಗಡೆಗೊಳಿಸಬೇಕಾಗಿದ್ದು, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಐ 58 ಎಸ್‌ಜಿಎಫ್ 2007 (ಭಾ–2) (7) ಬೆಂಗಳೂರು ದಿನಾಂಕ : 20ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕಬ್ಬು ಬೆಳೆಗಾರರ ನಷ್ಟ ಭರಿಸುವ ದೃಷ್ಟಿಯಿಂದ ಬಿಜಾಪುರ, ಬಾಗಲಕೋಟೆ, ಚಾಮರಾಜನಗರ ಮತ್ತು ಹಾವೇರಿ ಜಿಲ್ಲೆಗಳಿಗೆ ಈ ಕೆಳಕಂಡಂತೆ 6,64,00,000/– ರೂಗಳ (ಆರು ಕೋಟಿ ಅರವತ್ನಾಲ್ಕು ಲಕ್ಷ ರೂಗಳು ಮಾತ್ರ) ಪರಿಹಾರಧನವನ್ನು ಅರ್ಹ ರೈತರಿಗೆ ಪಾವತಿಸುವ ಸಲುವಾಗಿ ಬಿಜಾಪುರ, ಬಾಗಲಕೋಟೆ, ಚಾಮರಾಜನಗರ ಮತ್ತು ಹಾವೇರಿ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಈ ಕೆಳಕಂಡಂತೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| | | |
|---|---|---|
| 1. ಬಿಜಾಪುರ ಜಿಲ್ಲೆಗೆ | – | 4,00,91,000/– ರೂಗಳು |
| 2. ಬಾಗಲಕೋಟೆ ಜಿಲ್ಲೆಗೆ | – | 1,44,89,000/– ರೂಗಳು |
| 3. ಚಾಮರಾಜನಗರ ಜಿಲ್ಲೆಗೆ | – | 1,13,95,000/– ರೂಗಳು |
| 4. ಹಾವೇರಿ ಜಿಲ್ಲೆಗೆ | – | 4,25,000/– ರೂಗಳು |
| ಒಟ್ಟು | – | 6,64,00,000/– ರೂಗಳು |

2007–08ನೇ ಸಾಲಿನ ಆಯವ್ಯಯದಲ್ಲಿ ಯಾವುದೇ ಹಣವನ್ನು ಈ ಉದ್ದೇಶಕ್ಕಾಗಿ ನಿಗಧಿಪಡಿಸಿಲ್ಲವಾದ ಕಾರಣ ಈ ಹಣವನ್ನು 2007–08ನೇ ಸಾಲಿನಲ್ಲಿ ಮರುಹೊಂದಾಣಿಕೆ ಮೂಲಕ ಹೆಚ್ಚುವರಿ ಅನುದಾನವಾಗಿ ಒದಗಿಸಲಾಗಿದ್ದು, ಲೆಕ್ಕ ಶೀರ್ಷಿಕೆಗಳಾದ 2851–00–102–0–73 (ಪಿ) ಯಿಂದ ರೂ.4.00 ಕೋಟಿಗಳನ್ನು, ಲೆಕ್ಕ

ಶೀರ್ಷಿಕೆ 2852–80–800–0–46 (ಪಿ) ನಿಂದ ರೂ.1.00 ಕೋಟಿಯನ್ನು ಹಾಗೂ ಲೆಕ್ಕ ಶೀರ್ಷಿಕೆ 2852–80–800–0–47 (ಪಿ) ನಿಂದ ರೂ.1.00 ಕೋಟಿಗಳನ್ನು ಹೀಗೆ ಒಟ್ಟು ರೂ.6,64,00,000/–ಗಳನ್ನು (ರೂ.ಆರು ಕೋಟಿ ಅರವತ್ನಾಲ್ಕು ಲಕ್ಷಗಳು ಮಾತ್ರ) ಲೆಕ್ಕ ಶೀರ್ಷಿಕೆ "2852–08–201–0–07 (ಯೋಜನೆ) 106 ಸಹಾಯಧನ" ಕ್ಕೆ ಮರುಹೊಂದಾಣಿಕೆ ಮಾಡುವ ಮೂಲಕ ಕಬ್ಬು ಬೆಳೆಗಾರರ ರೈತರಿಗೆ ಬಿಡುಗಡೆ ಮಾಡಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಹಣವನ್ನು ಸರ್ಕಾರದ ಆದೇಶ ದಿನಾಂಕ: 13.06.07ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ ಹಾಗೂ ಈ ಕೆಳಕಂಡ ಷರತ್ತಿಗೊಳಪಟ್ಟು, ಅರ್ಹ ಕಬ್ಬು ಬೆಳೆಗಾರ ರೈತರಿಗೆ ಜಿಲ್ಲಾಧಿಕಾರಿಗಳ ಮುಖಾಂತರ ಬಿಡುಗಡೆ ಮಾಡಲು ಕ್ರಮವಹಿಸತಕ್ಕದು. ಜಿಲ್ಲಾಧಿಕಾರಿಗಳು ಈ ಕೆಳಕಂಡ ಷರತ್ತುಗಳನ್ವಯ ಪರಿಹಾರಧನವನ್ನು ಪಾವತಿ ಮಾಡತಕ್ಕದು.

1. ದಿನಾಂಕ 31.05.2007ಕ್ಕೆ 12 ತಿಂಗಳು ಪೂರೈಸಿ ಪಕ್ವವಾದ, ಸಕ್ಕರೆ ಕಾರ್ಖಾನೆಯಲ್ಲಿ ನುರಿಸದೇ ಜಮೀನಿನಲ್ಲಿ ಉಳಿದ ನೋಂದಾಯಿತವಲ್ಲದ ಕಬ್ಬಿಗೆ ಮಾತ್ರ ಪ್ರತಿ ಹೆಕ್ಟೇರ್‌ಗೆ ರೂ.25000/–ಗಳ ಪರಿಹಾರಧನವನ್ನು ಪಾವತಿಸತಕ್ಕದ್ದು,
2. ಪ್ರತಿ ಕ್ಲೇಮ್‌ಗಳ ಬಗ್ಗೆ ಮಹಜರ್ ಹಾಗೂ ಫೋಟೋಗಳನ್ನು ಕಡ್ಡಾಯವಾಗಿ ಕಡತದಲ್ಲಿ ಇಡತಕ್ಕದ್ದು. ಫೋಟೊಗಳನ್ನು ಕೃಷಿ ಇಲಾಖೆಯ ಅಧಿಕಾರಿಗಳು ದಿನಾಂಕ 31.05.2007ರಂದು 12 ತಿಂಗಳು ಪೂರೈಸಿ ಪಕ್ವವಾಗಿದೆ ಎಂದು ದೃಡೀಕರಿಸತಕ್ಕದ್ದು.
3. ಜಮೀನಿಗೆ ಸಂಬಂಧಿಸಿದಂತೆ ಕಂದಾಯ ಇಲಾಖೆಯು ನೀಡಿದ ಆರ್.ಟಿ.ಸಿ. ಪ್ರತಿಯನ್ನು ಕಡತದಲ್ಲಿ ಇಡತಕ್ಕದ್ದು.
4. ಮೇಲಿನ ಕ್ಲೇಮ್‌ಗಳು ಜಿಲ್ಲಾಧಿಕಾರಿಗಳಿಂದ ರಚಿಸಲ್ಪಟ್ಟ ತಂಡದವರಿಂದ ಶಿಫಾರಸ್ಸು ಆಗಿರತಕ್ಕದ್ದು. ಮಹಜರ್‌ಗಳನ್ನು ಸರಿಯಾಗಿ ಮಹಜರ್ ಮಾಡಿದ ದಿನಾಂಕ ಹಾಗೂ ದಿನಾಂಕ 31.05.2007ರಂದು 12 ತಿಂಗಳು ಪೂರೈಸಿದ ಬಗ್ಗೆ ದೃಢೀಕರಣವನ್ನು ಕಂದಾಯ ಇಲಾಖೆಯ ಅಧಿಕಾರಿಗಳಿಂದ ಮಾಡಿಸತಕ್ಕದ್ದು.
5. ಫಲಾನುಭವಿಗಳ ಪಟ್ಟಿಯನ್ನು ಸಂಬಂಧಿಸಿದ ಗ್ರಾಮ ಪಂಚಾಯಿತಿಗಳ ನೋಟೀಸ್ ಬೋರ್ಡ್‌ನ ಮೇಲೆ ಸಾರ್ವಜನಿಕರ ಮಾಹಿತಿಗಾಗಿ ಪ್ರಚುರಪಡಿಸತಕ್ಕದ್ದು.
6. ಈ ರೀತಿ ಬಿಡುಗಡೆ ಮಾಡಲಾಗುವ ಆರ್ಥಿಕ ನೆರವು ಯಾವುದೇ ರೀತಿಯಲ್ಲೂ ದುರುಪಯೋಗವಾಗದಂತೆ ಹಾಗೂ ಅರ್ಹವಿರುವ ರೈತರಿಗೆ ಮಾತ್ರ ಅಗತ್ಯವಿರುವ ದಾಖಲಾತಿಗಳನ್ನು ಪಡೆದ ನಂತರವೇ ವಿತರಿಸುವಂತೆ ಜಿಲ್ಲಾಧಿಕಾರಿಗಳು ಜಾಗ್ರತೆ ವಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 292 ಬಿಆರ್‌ಎಸ್ 2008 ದಿನಾಂಕ:20.03.2008 ರಲ್ಲಿ ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 441 ವೆಚ್ಚ–1/08 ದಿನಾಂಕ:20.03.2008ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 521

**ಪಿ. ಆನಂದ ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–1) ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ. ನಅಇ 112 ಟಿಟಿಪಿ 2000, ದಿನಾಂಕ: 22.7.2000.
2) ಸಹಾಯಕ ನಿರ್ದೇಶಕರು, ನಗರ ಯೋಜನಾ ಇಲಾಖೆ, ಚಿತ್ರದುರ್ಗ ಇವರ ಪತ್ರ ಸಂಖ್ಯೆ. ನಯೋಚಿಸನಿ:ಚ.ಕೆರೆ: ಮ.ಯೋ.ಪ:/2006–07, ದಿನಾಂಕ: 1.2.07.
3) ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಏಕ ಕಡತ ಸಂಖ್ಯೆ. ನಯೋ: ಉನಿ(ಕೇಂ.ಕಾ) /13/ಮ.ಯೋ.ಪ–1(ತಾ)/ ಚಳ್ಳಕೆರೆ/6940/2006–07.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಚಳ್ಳಕೆರೆ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಸ್ಥೂಲಾಭಿವೃದ್ಧಿ ಯೋಜನೆ) ಅಂತಿಮ ಅನುಮೋದನೆಯನ್ನು ನೀಡಲಾಗಿರುತ್ತದೆ.

ಮೇಲೆ ಕ್ರ.ಸಂ. (2) ರಲ್ಲಿ ಓದಲಾದ ಪತ್ರದಲ್ಲಿ ನಗರ ಯೋಜನಾ ಸಹಾಯಕ ನಿರ್ದೇಶಕರು, ಚಿತ್ರದುರ್ಗ ಇವರು ಚಳ್ಳಕೆರೆ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–1) ರ ನಕ್ಷೆ ಹಾಗೂ ವರದಿಯನ್ನು ತಯಾರಿಸಿ ನಗರ ಯೋಜನಾ ನಿರ್ದೇಶಕರ ಮುಖಾಂತರ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ.

2001 ರ ಜನಗಣತಿಯಂತೆ ಚಳ್ಳಕೆರೆ ಪಟ್ಟಣದ ನಗರದ ಜನಸಂಖ್ಯೆಯು 49,067 ಇದ್ದು, 20 ವರ್ಷಗಳ ಅವಧಿಗೆ ಅಂದರೆ, 2021 ನೇ ವೇಳೆಗೆ ಜನಸಂಖ್ಯೆಯು 1,25,000 ಆಗಬಹುದೆಂದು ಅಂದಾಜಿಸಿ, ಮಹಾ ಯೋಜನೆಯನ್ನು ರೂಪಿಸಲಾಗಿದೆ. ಚಳ್ಳಕೆರೆ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯ ವಿಸ್ತೀರ್ಣ 3216 ಹೆಕ್ಟೇರ್ ಇದ್ದು, ನಗರೀಕರಣ ಎಲ್ಲೆಯು 192.70 ಹೆಕ್ಟೇರ್ ಇರುತ್ತದೆ. ಚಳ್ಳಕೆರೆ ನಗರದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನಾ ವ್ಯವಸ್ಥೆಯ ಸಮಸ್ಯೆ, ಪಟ್ಟಣದ ಬೆಳವಣಿಗೆಯ ದಿಕ್ಕು ಇತ್ಯಾದಿಗಳನ್ನು ವಿಶ್ಲೇಷಿಸಿ, ಯೋಜನಾ ತತ್ವ ಹಾಗೂ ಮಹಾ ಯೋಜನೆ ತಯಾರಿಕೆ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961 ರ ಪ್ರಕರಣ (12) ರಲ್ಲಿ ನಿಗಧಿಪಡಿಸಿರುವ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಮುಂದಿನ ಬೆಳವಣಿಗೆಗೆ/ ವಿವಿಧ ಉಪಯೋಗಗಳಿಗೆ ಬೇಕಾಗಬಹುದಾದ ಜಾಗಗಳನ್ನು ಕಾಯ್ದಿರಿಸಿ, ನಗರೀಕರಣ ಎಲ್ಲೆಯನ್ನು ನಿಗಧಿಪಡಿಸಿ, ಮಹಾ ಯೋಜನೆಯನ್ನು ತಯಾರಿಸಲಾಗಿದೆ ಎಂದು ತಿಳಿಸುತ್ತಾ, ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961 ರ ಕಲಂ 13(1) ರನ್ವಯ ಕ್ರ.ಸಂ.3 ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವಂತೆ ನಗರ ಯೋಜನಾ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ. ನಅಇ 92 ಬೆಂರೂಪ್ರಾ 2007, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2008.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–1) ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961 ರ ಕಲಂ 13(1) ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

(ii) ವಲಯ ನಿಯಮಾವಳಿಗಳಲ್ಲಿ ಗ್ರೂಪ್ ಹೌಸಿಂಗ್‌ಗೆ ಸಂಬಂಧಿಸಿದಂತೆ ವರದಿಯ ಟಿಪ್ಪಣಿ ಸಂಖ್ಯೆ. 5 (ಪುಟ ಸಂಖ್ಯೆ. 102) ಕ್ಕೆ ಕೆಳಕಂಡಂತೆ ತಿದ್ದುಪಡಿ ಮಾಡಿಕೊಳ್ಳುವುದು.

"5. C.A. sites reserved in the development plan shall be developed by the owner and finally handed over to the Residents Association of the project for maintenance."

ಚಳ್ಳಕೆರೆ ಪಟ್ಟಣದ ನಗರದ ಮಹಾ ಯೋಜನೆ (ಪರಿಷ್ಕೃತ–1) ಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.436

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಶಿಕ್ಷಣ ಸಚಿವಾಲಯ**

**ಕ್ರಮಾಂಕ: ಇಡಿ 161 ಡಿಜಿಓ 2007, ಬೆಂಗಳೂರು, ದಿನಾಂಕ 25ನೇ ಜನವರಿ 2008.**

**ತಿದ್ದುಪಡಿ ಆದೇಶ**

ಸರ್ಕಾರಿ ಆದೇಶ ಸಂಖ್ಯೆ: ಇಡಿ 161 ಡಿಜಿಓ 2007, ದಿನಾಂಕ 25–9–2007ರ Tabular ಫಾರಂನಲ್ಲಿ ಕಾಲಂ 2ರಲ್ಲಿನ ಕ್ರಮ ಸಂಖ್ಯೆ (1)ರ ಮುಖ್ಯ ಗ್ರಂಥಾಲಯ ಅಧಿಕಾರಿ ಗ್ರೇಡ್–1 ರೂ. 10,000–18,150 ಎಂಬ ಬದಲಿಗೆ ಮುಖ್ಯ ಗ್ರಂಥಾಲಯ ಅಧಿಕಾರಿ ಗ್ರೇಡ್–1 ರೂ. 14,050–25,050 ಮತ್ತು ಕ್ರಮ ಸಂಖ್ಯೆ (2)ರ ಕಾಲಂ 2ರಲ್ಲಿನ ಮುಖ್ಯ ಗ್ರಂಥಾಲಯ ಅಧಿಕಾರಿ ಗ್ರೇಡ್–2 ರೂ. 8,000–14,800 ಬದಲಿಗೆ **"**ಮುಖ್ಯ ಗ್ರಂಥಾಲಯ ಅಧಿಕಾರಿ ಗ್ರೇಡ್–2 ವೇತನ ಶ್ರೇಣಿ ರೂ. 11,400–21600**"** ಎಂದು ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 303

**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆ–1,2)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ಸಂಖ್ಯೆ:ಗ್ರಾಅಪ.:17:ಪಘಯೋ:2007(ಭಾ 1) ಬೆಂಗಳೂರು, ದಿನಾಂಕ.14ನೇ ಮಾರ್ಚ್ 2008**

**ತಿದ್ದುಪಡಿ ಆದೇಶ**

ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2007-08ನೇ ಸಾಲಿಗೆ ಎರಡನೇ ಕಂತಿನ ಅನುದಾನವನ್ನು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ ದಿನಾಂಕ.20.2.2008 ರಂದು ಹೊರಡಿಸಿರುವ ಸರ್ಕಾರದ ಸಮಸಂಖ್ಯೆಯ ಆದೇಶದ ಪುಟ ಸಂಖ್ಯೆ:1ರಲ್ಲಿ ನಮೂದಾಗಿರುವ ರೂ.539.10 ಲಕ್ಷ (ಐದು ಕೋಟಿ ಮೂವತ್ತೊಂಭತ್ತು ಲಕ್ಷದ ಹತ್ತು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಎಂಬುದರ ಬದಲಾಗಿ ರೂ.539.10 ಲಕ್ಷ ಪೈಕಿ 2006-07ನೇ ಸಾಲಿನ ಖರ್ಚಾಗದೇ ಉಳಿದಿರುವ ಅನುದಾನವನ್ನು ಭಾಗಶ: ಕಡಿತಗೊಳಿಸಿ, ಉಳಿಕೆ ಅನುದಾನ ರೂ.373.53 ಲಕ್ಷ (ಮೂರು ಕೋಟಿ ಎಪ್ಪತ್ತ ಮೂರು ಲಕ್ಷದ ಐವತ್ತ ಮೂರು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಎಂದು ಹಾಗೂ ಸದರಿ ಆದೇಶದ ಪುಟ ಸಂ.4ರ ಅನುಬಂಧ-1ರಲ್ಲಿನ ಕಾಲಂ 10, 11ರ ಶೀರ್ಷಿಕೆಯಲ್ಲಿ ನಮೂದಾಗಿ ರುವ ಕಾಲಂ 8ರ ಪೈಕಿ ಎಂಬುದರ ಬದಲಾಗಿ ಕಾಲಂ 9ರ ಪೈಕಿ ಎಂದು ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಂ. ಶಿರೋಳ್**

ಪಿ.ಆರ್. 509

ನಿರ್ದೇಶಕರು

ಯೋಜನೆ ಸಮನ್ವಯ ಹಾಗೂ ಮೌಲ್ಯಮಾಪನ ಘಟಕ

ಹಾಗೂ ಪದ ನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ಸಂಖ್ಯೆ: ಕಸಂವಾಪ್ರ 127 ಕೆಎಂಯು 2007, ಬೆಂಗಳೂರು, ದಿನಾಂಕ '14ನೇ ಫೆಬ್ರವರಿ 2008.**

**ತಿದ್ದೋಲೆ**

ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 127 ಕೆಎಂಯು 2007, ದಿನಾಂಕ 22–12–2007ರ ಆದೇಶ ಭಾಗದಲ್ಲಿನ ಕ್ರಮ ಸಂಖ್ಯೆ 4ನ್ನು ದಿನಾಂಕ 22–12–2007ರಿಂದಲೇ ಜಾರಿಗೆ ಬರುವಂತೆ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

"4. ಶ್ರೀ ರವಿಕುಮಾರ್ ಕಾಶಿ, ಕಲಾವಿದರು, ಬೆಂಗಳೂರು, ಸದಸ್ಯರು."

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 324

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–7), ಬೆಂಗಳೂರು ದಿನಾಂಕ 26ನೇ ಮಾರ್ಚ್ 2008.**

**ತಿದ್ದುಪಡಿ**

**ವಿಷಯ :** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ಸಕ್ಕರೆ ವರ್ಷ 2006–07ರ ಸಾಲಿಗೆ ವಿಶೇಷ ನೆರವು.

ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) (8) ದಿನಾಂಕ 25–3–08ರಲ್ಲಿನ ಪುಟ ಸಂಖ್ಯೆ: 4ರಲ್ಲಿನ ಕ್ರಮ ಸಂಖ್ಯೆ 11ರಲ್ಲಿ ಜಿಲ್ಲಾಧಿಕಾರಿಗಳು "ಬಳ್ಳಾರಿ" ಎಂದು ಸೇರಿಸಿ ಓದಿಕೊಳ್ಳಲು ಮತ್ತು ಪುಟ 6ರಲ್ಲಿನ ಅನುಬಂಧದಲ್ಲಿನ ಕ್ರಮ ಸಂಖ್ಯೆ: 23ರಲ್ಲಿರುವ ಸಂಬಂಧಿಸಿದ ಜಿಲ್ಲಾಧಿಕಾರಿ "ಮಂಡ್ಯ" ಎಂಬುದನ್ನು "ಬಳ್ಳಾರಿ" ಎಂದು ಓದಿಕೊಳ್ಳುವುದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 555

**ಪಿ. ಆನಂದ ಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಸಂಖ್ಯೆ: ಸಿಐ 19 ಎಸ್‌ಜಿಎಫ್ 08 (ಭಾ–2), ಬೆಂಗಳೂರು ದಿನಾಂಕ 14ನೇ ಮಾರ್ಚ್ 2008**

**ತಿದ್ದುಪಡಿ**

**ವಿಷಯ :** 2007–08ನೇ ಸಾಲಿನಲ್ಲಿ ಕಬ್ಬು ಬೆಳೆದ ರೈತರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು.

ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 08(ಭಾ–2) ದಿನಾಂಕ 12–3–2008ರಲ್ಲಿನ ಪುಟ 3ರಲ್ಲಿರುವ 2ನೇ ಕಂಡಿಕೆಯ 2ನೇ ಸಾಲಿನಲ್ಲಿರುವ "ದಿನಾಂಕ 31–3–07ರ ಅಂತ್ಯಕ್ಕೆ" ಎಂಬುದನ್ನು "ದಿನಾಂಕ 31–3–08ರ ಅಂತ್ಯಕ್ಕೆ" ಎಂದು ಮತ್ತು ಪುಟ 4ರಲ್ಲಿರುವ ಸೌಲಭ್ಯ–3ರಲ್ಲಿನ 5ನೇ ಸಾಲಿನಲ್ಲಿರುವ "50 ಕಿ.ಮೀ. ಹೊರಗಿನಿಂದ" ಎಂಬುದನ್ನು "30 ಕಿ.ಮೀ. ಹೊರಗಿನಿಂದ" ಎಂದು ಓದಿಕೊಳ್ಳುವುದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.463

**ಪಿ. ಆನಂದ ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ದಕ್ಷಿಣ ಕನ್ನಡ ಜಿಲ್ಲಾ (ಪರಿಷ್ಕೃತ) ಗ್ಯಾಸೆಟಿಯರ್‌ನ ಬಿಡಿಪ್ರತಿಯ ಮಾರಾಟ ಬೆಲೆ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್, ಬೆಂಗಳೂರು ಅವರ ಪತ್ರ ಸಂ: ಕಗ್ಯಾಇ/ಸಿ(2)/ದಕ ಜಿಗ್ಯಾ/07–08 ದಿ: 12–10–2007

**ಪ್ರಸ್ತಾವನೆ:**

ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಅವರು ಮೇಲೆ ಓದಲಾದ ದಿ: 12–10–2007ರ ಪತ್ರದಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್‌ನ (ಪರಿಷ್ಕೃತ) ಮುದ್ರಣ ಪೂರ್ಣಗೊಂಡಿದ್ದು ಬಿಡುಗಡೆಗೆ ಸಿದ್ಧವಾಗಿರುವುದರಿಂದ ಸಂಪುಟದ ಬಿಡಿಪ್ರತಿಯ ಮಾರಾಟ ಬೆಲೆಯನ್ನು ನಿಗಧಿಪಡಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 1 ಕರಾಗೆ 2008, ಬೆಂಗಳೂರು ದಿನಾಂಕ: 4ನೇ ಫೆಬ್ರವರಿ 2008**

ಸರ್ಕಾರವು ದಕ್ಷಿಣ ಕನ್ನಡ ಜಿಲ್ಲಾ (ಪರಿಷ್ಕೃತ) ಗ್ಯಾಸೆಟಿಯರ್‌ನ ಬಿಡಿಪ್ರತಿಯ ಮಾರಾಟ ಮುಖ ಬೆಲೆಯನ್ನು ರೂ.290/– ಗಳಿಗೆ ನಿಗಧಿಪಡಿಸುತ್ತದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.267

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ವಿಷಯ:** 'ಬೆಂಗಳೂರು ಒಂದು ಪಕ್ಷಿನೋಟ' ಎಂಬ ಐತಿಹಾಸಿಕ ದಾಖಲೆಗಳ ಪ್ರದರ್ಶನ ಕಾರ್ಯಕ್ರಮವನ್ನು ಕೈಗೊಳ್ಳಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 46 ಸ್ವೀಮರ 2007 ದಿನಾಂಕ 27–4–2007
2) ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರ ಪತ್ರ ಸಂಖ್ಯೆ: ಎಆರ್‌ಎಸ್ 47 ಎನ್‌ಎಐ 2007 ದಿನಾಂಕ 4–2–2008

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯ 2007–08ನೇ ಸಾಲಿನ ಯೋಜನಾ ಕಾರ್ಯಕ್ರಮಗಳಿಗೆ ಅನುಮೋದನೆ ನೀಡಿ ಹೊರಡಿಸಲ್ಪಟ್ಟ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ದಾಖಲೆಗಳ ಪ್ರದರ್ಶನ, ವಿಚಾರ ಸಂಕಿರಣ ಇತ್ಯಾದಿಗಳನ್ನು ಏರ್ಪಡಿಸುವ ಸಲುವಾಗಿ ರೂ.6.00 ಲಕ್ಷಗಳನ್ನು ನಿಗದಿಪಡಿಸಿದೆ. ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಇವರು ಮೇಲೆ (2)ರಲ್ಲಿ ಓದಲಾದ ಅವರ ಪತ್ರದಲ್ಲಿ ನಾಡಿನ ಜನತೆಗೆ ಸುವರ್ಣ ಕರ್ನಾಟಕದ ಸಂಭ್ರಮದ ವರ್ಷದಲ್ಲಿ ಪತ್ರಾಗಾರ ಸಪ್ತಾಹದ ಅಂಗವಾಗಿ ದಾಖಲೆಗಳ ಬಗ್ಗೆ ಅರಿವು ಮೂಡಿಸಲು ಐತಿಹಾಸಿಕ ದಾಖಲೆಗಳ ಹಾಗೂ ಛಾಯಾಚಿತ್ರಗಳ ಪ್ರದರ್ಶನವನ್ನು ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಏರ್ಪಡಿಸಲು ಉದ್ದೇಶಿಸಿದ್ದು ಇದನ್ನು ಗೌರವಾನ್ವಿತ ರಾಜ್ಯಪಾಲರು ಉದ್ಘಾಟಿಸುವ ಕಾರ್ಯಕ್ರಮವಿರುವುದರಿಂದ ಸದರಿ ಕಾರ್ಯಕ್ರಮವನ್ನು ಒಟ್ಟು ರೂ.6.00 ಲಕ್ಷಗಳಲ್ಲಿ ಕೈಗೊಳ್ಳಲು ಸರ್ಕಾರದ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 1 ರಾಪಸ 2008 ಬೆಂಗಳೂರು, ದಿನಾಂಕ 3ನೇ ಮಾರ್ಚ್ 2008**

ಐತಿಹಾಸಿಕ ದಾಖಲೆಗಳ ಬಗ್ಗೆ ಜನತೆಯಲ್ಲಿ ಅರಿವು ಮೂಡಿಸುವ ಸಲುವಾಗಿ ಐತಿಹಾಸಿಕ ದಾಖಲೆಗಳು ಮತ್ತು ಛಾಯಾಚಿತ್ರಗಳ ಪ್ರದರ್ಶನವನ್ನು ಬೆಂಗಳೂರು ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಫೆಬ್ರವರಿ 2008ರಂದು ರೂ.6.00 ಲಕ್ಷಗಳ (ಆರು ಲಕ್ಷ ರೂಪಾಯಿ ಮಾತ್ರ) ವೆಚ್ಚದಲ್ಲಿ ಏರ್ಪಡಿಸಲು ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–104–0–01–059–ಇತರೆ ಖರ್ಚು (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು. ಈ ಆದೇಶವನ್ನು ಇಲಾಖೆಗೆ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.411

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ).

**ವಿಷಯ:** ಚಾಮರಾಜನಗರ ಜಿಲ್ಲಾ ಗ್ಯಾಸೆಟಿಯರ್ ಸಂಪುಟದ ಅಧ್ಯಾಯಗಳನ್ನು ಹೊರಗಿನ ವಿದ್ವಾಂಸರಿಂದ ರಚಿಸಲು ಸಂಭಾವನೆ ನೀಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಗ್ಯಾಇ:ಸಿ(2):ಚಾಜಿಗ್ಯಾ: ಹೊ:ಗು:2007/155 ದಿನಾಂಕ 18–7–2007

**ಪ್ರಸ್ತಾವನೆ:**

ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ 18–7–2007ರ ತಮ್ಮ ಪತ್ರದಲ್ಲಿ ಗ್ಯಾಸೆಟಿಯರ್ ಇಲಾಖೆಯ ವತಿಯಿಂದ ಚಾಮರಾಜನಗರ ಜಿಲ್ಲಾ ಗ್ಯಾಸೆಟಿಯರ್ ಪ್ರಕಟಿಸುವ ಯೋಜನೆಯನ್ನು ಹಮ್ಮಿಕೊಂಡಿದ್ದು, ನಿಗದಿತ ಸಮಯದಲ್ಲಿ ಯೋಜನೆಯನ್ನು ಪೂರ್ಣಗೊಳಿಸಲು ಇಲಾಖೆಯಲ್ಲಿ ಸಂಪಾದಕರ ಕೊರತೆ ಇರುವುದರಿಂದ, ಚಾಮರಾಜನಗರ ಜಿಲ್ಲಾ ಗ್ಯಾಸೆಟಿಯರ್‌ನ ಏಳು ಅಧ್ಯಾಯಗಳ ಸಂಪಾದನಾ ಕಾರ್ಯವನ್ನು ಹೊರಗಿನ ವಿದ್ವಾಂಸರಿಂದ ನಿರ್ವಹಿಸಲು ಕೋರಿದ್ದು ಹಾಗೂ ಇದಕ್ಕಾಗಿ ತಲಾ ಇಪ್ಪತ್ತು ಸಾವಿರ ರೂಪಾಯಿಗಳ ಸಂಭಾವನೆ ವೆಚ್ಚವಾಗಿ ಒಟ್ಟು 1.40 ಲಕ್ಷ ರೂ.ಗಳನ್ನು ಮಂಜೂರು ಮಾಡಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 17 ಕರಾಗೆ 2007 ಬೆಂಗಳೂರು, ದಿನಾಂಕ: 3ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಗ್ಯಾಸೆಟಿಯರ್ ಇಲಾಖೆ ವತಿಯಿಂದ ಚಾಮರಾಜನಗರ ಜಿಲ್ಲಾ ಗ್ಯಾಸೆಟಿಯರ್ ಪ್ರಕಟಣಾ ಕಾರ್ಯವನ್ನು ಹೊರಗಿನ ವಿದ್ವಾಂಸರಿಂದ ನಿರ್ವಹಿಸಲು ಅನುಮೋದನೆ ನೀಡಲಾಗಿದೆ. ಹಾಗೂ ಈ ಉದ್ದೇಶಕ್ಕಾಗಿ ರೂ.1.40 ಲಕ್ಷಗಳನ್ನು (ರೂಪಾಯಿಗಳು ಒಂದು ಲಕ್ಷ ನಲ್ವತ್ತು ಸಾವಿರಗಳು ಮಾತ್ರ) (ರೂ.10000/– ಪ್ರವಾಸ ವೆಚ್ಚಕ್ಕಾಗಿ ಮತ್ತು ರೂ.10000/– ಅಧ್ಯಾಯ ರಚನೆಗಾಗಿ) ಮುಖ್ಯಸಂಪಾದಕರು, ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರಿಗೆ ಮಂಜೂರಾತಿ ನೀಡಿದೆ.

ಈ ಸಂಬಂಧ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 3454–02–110–0–01–059 (ಯೋಜನೆ) ಇದರಡಿಯಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಇವರೊಂದಿಗೆ ಸಮಾಲೋಚಿಸಿ ಇಲಾಖೆಗೆ ಪ್ರತ್ಯಾಯೋಜಿ ಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.86

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ).

**ವಿಷಯ:** ಶ್ರೀ ಎಸ್.ಎನ್. ರಾಜು, ಸಂಪಾದಕರು, ಗ್ರೂಪ್–2, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಇವರಿಗೆ 20 ವರ್ಷಗಳಿಗೆ ನೀಡುವ ವೇತನ ಬಡ್ತಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ ಎಫ್‌ಡಿ 13 ಎಸ್‌ಆರ್‌ಪಿ 2002 ದಿನಾಂಕ 9–5–2002
2) ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಗ್ಯಾಇ:ಸಿ(1):ಸ್ವ.ವಿ.ಭ/2006–07, ದಿನಾಂಕ 18–1–2007

**ಪ್ರಸ್ತಾವನೆ:**

ಯಾವುದೇ ಪದೋನ್ನತಿ ಇಲ್ಲದೆ 20 ವರ್ಷಗಳ ಕಾಲ ಒಂದೇ ಹುದ್ದೆಯಲ್ಲಿ ಇರುವ ಸರ್ಕಾರಿ ನೌಕರರಿಗೆ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡಲು ಮೇಲೆ (1)ರಲ್ಲಿ ಓದಲಾದ ದಿನಾಂಕ 9–5–2002ರ ಸರ್ಕಾರದ ಆದೇಶದಲ್ಲಿ ಅವಕಾಶ ಕಲ್ಪಿಸಲಾಗಿದೆ. ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರು

ಮೇಲೆ (2)ರಲ್ಲಿ ಓದಲಾದ ದಿನಾಂಕ 18-1-2007ರ ಪತ್ರದಲ್ಲಿ ಶ್ರೀ ಎಸ್.ಎನ್.ರಾಜು, ಸಂಪಾದಕರು, ಗ್ರೇಡ್-2, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಅವರು 8-4-1985ರಿಂದ ಸತತವಾಗಿ ಸಂಪಾದಕ ಹುದ್ದೆಯಲ್ಲೇ ಕಾರ್ಯನಿರ್ವಹಿಸುತ್ತಿದ್ದು ಯಾವುದೇ ಪದೋನ್ನತಿ ಪಡೆದಿರುವುದಿಲ್ಲ ಎಂದು ವರದಿ ಮಾಡಿರುತ್ತಾರೆ. ಈ ಅಧಿಕಾರಿಯು ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದು ಇವರ ಕಾರ್ಯನಿರ್ವಹಣಾ ವರದಿಗಳು ತೃಪ್ತಿಕರವಾಗಿದ್ದು ಮೇಲೆ (1)ರಲ್ಲಿ ಓದಲಾದ ದಿನಾಂಕ 9-5-2002ರ ಆದೇಶದಲ್ಲಿನ ನಿಬಂಧನೆಗಳನ್ನು ಪೂರೈಸಿರುವುದರಿಂದ ಇವರು ಸಂಪಾದಕ ಹುದ್ದೆಯಲ್ಲಿ 20 ವರ್ಷಗಳು ಪೂರೈಸಿದ 8-4-2005ರಿಂದ ಇವರಿಗೆ ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಅಧಿಕಾರಿಯ ಸೇವಾ ವಿವರ ಇತ್ಯಾದಿಗಳು ತೃಪ್ತಿಕರವಾಗಿರುವುದನ್ನು ಮನಗಂಡು ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 23 ಕರಾಗೆ 2006, ಬೆಂಗಳೂರು, ದಿನಾಂಕ: 1ನೇ ಜನವರಿ 2008.**

ಶ್ರೀ ಎಸ್.ಎನ್. ರಾಜು, ಸಂಪಾದಕರು, ಗ್ರೇಡ್-2, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಅವರು ಅದೇ ಹುದ್ದೆಯಲ್ಲಿ 20 ವರ್ಷಗಳನ್ನು ಪೂರೈಸಿದ ದಿನಾಂಕ: 8-4-2005ರಿಂದ ಜಾರಿಗೆ ಬರುವಂತೆ ಅವರಿಗೆ ವೇತನ ಶ್ರೇಣಿ ರೂ.6000-150-7200-200-8800-260-10880-320-11200 (ಪರಿಷ್ಕೃತ ವೇತನ ಶ್ರೇಣಿ ರೂ.11400-300-12300-350-14400-400-16800-450-19500-525-21600) ರಲ್ಲಿ ಒಂದು ವೇತನ ಬಡ್ತಿಯನ್ನು ಮಂಜೂರು ಮಾಡಿದೆ.

ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ 846 ಐಎಫ್ಎಸ್ 2007 ದಿನಾಂಕ 22-10-2007 ರಲ್ಲಿ ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಅವರ ಸಹಮತಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 48

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ).

**ವಿಷಯ:** ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ಸಂಗ್ರಹವಾಗಿರುವ ದಾಖಲೆ ಗಳನ್ನು ಸಂರಕ್ಷಿಸಲು ಸಾಮಗ್ರಿಗಳನ್ನು ಖರೀದಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ:ಸಂಕ ಇ 21 ರಾಪಸ 2006 ದಿ: 11-10-2006
2. ಸರ್ಕಾರಿ ಆದೇಶ ಸಂ: ಕಸಂವಾಪ್ರ 30 ರಾಪಸ 2006 ದಿ: 17-3-2007
3. ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರ ಪತ್ರ ಸಂ: ಎಆರ್ಎಸ್ 20 ಎನ್ ಎಐ 05 ದಿ: 3-7-07

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ಸಂಗ್ರಹವಾಗಿರುವ ದಾಖಲೆಗಳನ್ನು ಸಂರಕ್ಷಿಸುವ ಸಲುವಾಗಿ ಸಾಮಗ್ರಿಗಳನ್ನು ಖರೀದಿಸಲು ಮೇಲೆ (1)ರಲ್ಲಿ ಮತ್ತು (2)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳ ಮ್ಯಾಚಿಂಗ್ ಗ್ರ್ಯಾಂಟ್ ಯೋಜನೆಯಡಿಯಲ್ಲಿ ಒಟ್ಟು ರೂ.9 ಲಕ್ಷಗಳನ್ನು ಬಿಡುಗಡೆ ಮಾಡಲಾಗಿತ್ತು. ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರು ಮೇಲೆ (3)ರಲ್ಲಿ ಓದಲಾದ ದಿ: 3-7-2007ರ ಅವರ ಪತ್ರದಲ್ಲಿ ಸದರೀ ಮೊತ್ತದಿಂದ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ಸಂಗ್ರಹವಾಗಿರುವ ದಾಖಲೆಗಳನ್ನು ಸಂರಕ್ಷಿಸುವ ಸಲುವಾಗಿ ಸಾಮಗ್ರಿಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯಿದೆ 1999 ಹಾಗೂ ನಿಯಮಗಳು 2000 ದನ್ವಯ ಸೂಕ್ತ ಟೆಂಡರುಗಳನ್ನು ಕರೆದು ಖರೀದಿಸಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 28 ರಾಪಸ 2007, ಬೆಂಗಳೂರು ದಿನಾಂಕ: 3ನೇ ಜನವರಿ 2008**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯಿದೆ 1999 ಹಾಗೂ ನಿಯಮಗಳು 2000 ದಲ್ಲಿ ನಿಗಧಿಪಡಿಸಿರುವ ನಿಬಂಧನೆಗಳನ್ನು ಪಾಲಿಸಬೇಕೆಂಬ ಷರತ್ತಿಗೆ ಒಳಪಟ್ಟ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳ ಮ್ಯಾಚಿಂಗ್ ಗ್ರ್ಯಾಂಟ್ ಯೋಜನೆಯಲ್ಲಿ ಬಿಡುಗಡೆ ಆದ ಒಟ್ಟು 9 ಲಕ್ಷ ರೂ.ಗಳ ವೆಚ್ಚದಲ್ಲಿ ಪತ್ರಾಗಾರ ಇಲಾಖೆಯಲ್ಲಿ ಸಂಗ್ರಹವಾದ ದಾಖಲೆಗಳನ್ನು ಸಂರಕ್ಷಿಸುವ ಸಲುವಾಗಿ ಸಾಮಗ್ರಿಗಳನ್ನು ಖರೀದಿಸಲು ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರೊಡನೆ ಸಮಾಲೋಚಿಸಿ ಇಲಾಖೆಗೆ ಪ್ರತ್ಯಾಯೋಜನೆ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.85

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ).

**ವಿಷಯ:** ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಸಂಶೋಧನಾ ಸಂಸ್ಥೆ ಸಹಯೋಗದಲ್ಲಿ ಶಾಸನಶಾಸ್ತ್ರ ಕಾರ್ಯಾಗಾರ ನಡೆಸಲು ಮಾಚಿಂಗ್ ಗ್ರಾಂಟ್ ಪಾವತಿಗಾಗಿ ಮಂಜೂರಾತಿ ನೀಡುವ ಬಗ್ಗೆ

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 46 ಸ್ವಿಮರ 2007 ದಿನಾಂಕ 27–4–2007

2) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ:ಎಸ್‌ಟಿ:1:52:2007–08 ದಿನಾಂಕ 17–1–2008

**ಪ್ರಸ್ತಾವನೆ:**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ 2007–08ನೇ ಸಾಲಿನ ಮುಂದುವರಿದ ಯೋಜನಾ ಕಾರ್ಯಕ್ರಮಗಳಿಗೆ ಅನುಮೋದನೆ ನೀಡಿ ಹೊರಡಿಸಲ್ಪಟ್ಟ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶಾಸನಗಳ ಸರ್ವೇಕ್ಷಣೆ ಬಾಬ್ತಿಗಾಗಿ ರೂ.50,000/–ಗಳನ್ನು ನಿಗದಿಪಡಿಸಲಾಗಿದೆ. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಸಂಶೋಧನಾ ಸಂಸ್ಥೆಯು ಶಾಸನಶಾಸ್ತ್ರಕ್ಕೆ ಸಂಬಂಧಿಸಿದಂತೆ ಮೂರು ದಿನಗಳ ಕಾರ್ಯಾಗಾರವನ್ನು ನಡೆಸಲಿದ್ದು ಆ ಕಾರ್ಯಾಗಾರವು ಇಲಾಖೆಗೆ ಹೊಸದಾಗಿ ನೇಮಕಗೊಂಡ 10 ಮಂದಿ ಸಹಾಯಕ ಕ್ಯುರೇಟರ್‌ಗಳು ಹಾಗೂ ತಾಂತ್ರಿಕ ಸಿಬ್ಬಂದಿಗೆ ಉಪಯುಕ್ತವಾಗುವ ಕಾರಣ ಇದರ ವೆಚ್ಚ ಒಟ್ಟು ರೂ.1,34,500/–ಗಳಲ್ಲಿ ರೂ.50,000/–ಗಳನ್ನು ಮ್ಯಾಚಿಂಗ್ ಗ್ರಾಂಟ್ ರೂಪದಲ್ಲಿ ಪಾವತಿ ಮಾಡಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 30 ಕೆಎಂಯು 2008 ಬೆಂಗಳೂರು, ದಿನಾಂಕ 3ನೇ ಮಾರ್ಚ್ 2008**

ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಸಂಶೋಧನಾ ಸಂಸ್ಥೆಯು ನಡೆಸುವ ಶಾಸನಶಾಸ್ತ್ರಕ್ಕೆ ಸಂಬಂಧಿಸಿದಂತೆ ನಡೆಸಲಿರುವ 3 ದಿನಗಳ ಕಾರ್ಯಾಗಾರಕ್ಕಾಗಿ ರಿಜಿಸ್ಟ್ರಾರ್, ಕರ್ನಾಟಕ ವಿಶ್ವವಿದ್ಯಾನಿಲಯ, ಪಾವಟನಗರ, ಧಾರವಾಡ ಅವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಪೇಯೀಸ್ ರಸೀತ್ ಮೂಲಕ ರೂ.50,000/–ಗಳನ್ನು (ರೂಪಾಯಿ ಐವತ್ತು ಸಾವಿರ ಮಾತ್ರ) ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

1) ಅನುದಾನವನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕೆ ಖರ್ಚು ಮಾಡತಕ್ಕದ್ದು.
2) ಸದರಿ ಹಣ ಬಳಕೆಯಾದ ಬಗ್ಗೆ ಹಣಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
3) ಕಾರ್ಯಾಗಾರವನ್ನು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಅಧಿಕಾರಿಗಳ ಮೇಲುಸ್ತುವಾರಿಯಲ್ಲಿ ನಡೆಸತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) – 059 ರಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರೊಡನೆ ಸಮಾಲೋಚಿಸಿ ಇಲಾಖೆಗೆ ಪ್ರದತ್ತವಾದ ಆರ್ಥಿಕ ಅಧಿಕಾರ ದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.459

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ).

**ವಿಷಯ:** ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು ಇಲ್ಲಿಗೆ ಬೈಬ್ಯಾಕ್ ಸ್ಕೀಮ್‌ನಲ್ಲಿ ಹೊಸ ಜೆರಾಕ್ಸ್ ಯಂತ್ರ ಖರೀದಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರ ಪತ್ರ : ಎಆರ್‌ಎಸ್ 22 ಎಡಿಎಂ 07 ದಿ: 31–8–07

**ಪ್ರಸ್ತಾವನೆ:**

ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರು ಮೇಲೆ ಓದಲಾದ ದಿ: 31–8–2007ರ ಪತ್ರದಲ್ಲಿ ವಿಭಾಗೀಯ ಪತ್ರಾಗಾರ ಕಛೇರಿ, ಮೈಸೂರು ಇಲ್ಲಿರುವ ಜೆರಾಕ್ಸ್ ಯಂತ್ರವು ಸರಿಯಾಗಿ ಕೆಲಸ ನಿರ್ವಹಿಸದೇ ಇರುವುದರಿಂದ ಹಾಗೂ ಐತಿಹಾಸಿಕ ದಾಖಲೆಗಳು, ಸರ್ಕಾರಿ ಆದೇಶ, ಸುತ್ತೋಲೆ ಇತ್ಯಾದಿಗಳ ಪ್ರತಿಗಳಿಗಾಗಿ ಸಾರ್ವಜನಿಕರು ಮತ್ತು ಇಲಾಖೆಗಳ ಬೇಡಿಕೆ ಬರುತ್ತಿರುವ ಕಾರಣ, ಮೈಸೂರಿನ ತೇಜಸ್ ಸರ್ವೀಸ್ ಸಂಸ್ಥೆಯಿಂದ 71,254/– ರೂ.ಗಳ ವೆಚ್ಚದಲ್ಲಿ ಒಂದು ಮೋದಿ ಕಂಪೆನಿಯ ಜೆರಾಕ್ಸ್ ಯಂತ್ರವನ್ನು ಬೈಬ್ಯಾಕ್ ಸ್ಕೀಂನಲ್ಲಿ ಖರೀದಿಸಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 30 ರಾಪಸ 2007, ಬೆಂಗಳೂರು ದಿನಾಂಕ: 28ನೇ ಡಿಸೆಂಬರ್ 2007**

ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯ ಮೈಸೂರು ವಿಭಾಗೀಯ ಕಛೇರಿಗೆ ಒಂದು ಮೋದಿ ಜೆರಾಕ್ಸ್ ಯಂತ್ರವನ್ನು ಮೈಸೂರಿನ ತೇಜಸ್ ಸರ್ವೀಸ್ ಸಂಸ್ಥೆಯಿಂದ ರೂ. 71,254/– ಗಳ ವೆಚ್ಚದಲ್ಲಿ ಬೈಬ್ಯಾಕ್ ಸ್ಕೀಮ್ ನಲ್ಲಿ ಖರೀದಿಸಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–104–0–01–051 ಸಾಮಾನ್ಯ ವೆಚ್ಚಗಳು (ಯೋಜನೆ) ರಲ್ಲಿ ಭರಿಸತಕ್ಕದ್ದು.

ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಪ್ರವಾಸೋದ್ಯಮ ಇಲಾಖೆ ಅವರ ಸಹಮತಿಯನ್ನು ಅ.ಟಿ.ಸಂ: ಶಿಇ 845 ಪಿಎಫ್‌ಎಸ್ 2007 ದಿನಾಂಕ: 22–10–2007 ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.49

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ವಿಷಯ:** ವಿಧಾನಸೌಧದ ಕೊಠಡಿ ಸಂಖ್ಯೆ: 11ರಲ್ಲಿರುವ ಸಚಿವಾಲಯದ ಕಡತಗಳು, ರಿಜಿಸ್ಟರ್, ಪೀಠೋಪಕರಣಗಳನ್ನು ವಿಕಾಸಸೌಧಕ್ಕೆ ಸಾಗಿಸುವ ಕಾಮಗಾರಿಗೆ ಅನುಮೋದನೆ ನೀಡುವ ಬಗ್ಗೆ

**ಓದಲಾಗಿದೆ:** ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಎಆರ್‌ಎಸ್ 7 ಎಡಿಎಂ 2001 ದಿನಾಂಕ 10–1–2008

**ಪ್ರಸ್ತಾವನೆ:**

ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಅವರು ಮೇಲೆ ಓದಲಾದ ದಿನಾಂಕ 10–1–2008ರ ಪತ್ರದಲ್ಲಿ ವಿಧಾನಸೌಧದ ಕೊಠಡಿ ಸಂಖ್ಯೆ 11ರಲ್ಲಿರುವ ಸಾಮಾನ್ಯ ದಾಖಲೆಗಳು, ರಿಜಿಸ್ಟರ್‌ಗಳು, ಪೀಠೋಪಕರಣಗಳು ಇತ್ಯಾದಿಗಳನ್ನು ವಿಕಾಸಸೌಧಕ್ಕೆ ಸ್ಥಳಾಂತರಿಸುವ ಕಾರ್ಯವನ್ನು ನಿರ್ವಹಿಸಲು ಟೆಂಡರ್‌ಗಳನ್ನು ಆಹ್ವಾನಿಸಿದ್ದು ಒಟ್ಟು 3 ಸಂಸ್ಥೆಗಳು ಪಾಲ್ಗೊಂಡಿದ್ದವೆಂದು ತಿಳಿಸಿದ್ದಾರೆ. ಇವುಗಳಲ್ಲಿ ಲಕ್ಷ್ಮಣ್ ಪ್ಯಾಕರ್ಸ್ ಅಂಡ್ ಮೂವರ್ಸ್ ಹಾಗೂ ಪ್ರಭುಸ್ವಾಮಿ ಪ್ಯಾಕರ್ಸ್ ಅಂಡ್ ಮೂವರ್ಸ್ ಸಂಸ್ಥೆಗಳು ಕಡಿಮೆ ದರ ಲಗತ್ತಿಸಿದ್ದರೂ ಅವುಗಳು ನೋಂದಾಯಿತ ಸಂಸ್ಥೆಗಳಾಗಿರದ ಸೇಲ್ಸ್ ಟ್ಯಾಕ್ಸ್ ಸಂಸ್ಥೆಯ ನೋಂದಣಿ ಹೊಂದಿರುವುದಿಲ್ಲ, ಆದಾಯ ತೆರಿಗೆ ಪಾವತಿದಾರರಲ್ಲ, ಕಾರ್ಮಿಕ ಇಲಾಖೆಯ ಪರವಾನಿಗೆ ಪಡೆದಿಲ್ಲ ಹಾಗೂ ಈ ಕಾಮಗಾರಿಗೆ ಸಂಬಂಧಿಸಿದ ಅನುಭವ ಹೊಂದಿಲ್ಲದ ಕಾರಣ ಅರ್ಹರಾಗದೇ, ನಂತರದ ಬೆಂಗಳೂರು ಪ್ಯಾಕರ್ಸ್ ಅಂಡ್ ಮೂವರ್ಸ್ ಸಂಸ್ಥೆಯು ರೂ.2,51,776/– ಗಳನ್ನು ನಮೂದಿಸಿದ್ದು ಅದು ಎಲ್ಲ ಅರ್ಹತೆಯನ್ನು ಹೊಂದಿರುವ ಕಾರಣ ಸದರೀ ಸಂಸ್ಥೆಗೆ ಸ್ಥಳಾಂತರ ಕಾರ್ಯವನ್ನು ವಹಿಸಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಪ್ರಸ್ತಾವನೆಯೊಡನೆ ನಿರ್ದೇಶಕರು ಸಲ್ಲಿಸಿರುವ ಸಮರ್ಥನೆ ಇನ್ನಿತರ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ:

**ಆದೇಶ ಸಂಖ್ಯೆ: ಕಸಂವಾಪ್ರ 33 ರಾಪಸ 2007 ಬೆಂಗಳೂರು, ದಿನಾಂಕ 14ನೇ ಜನವರಿ 2008**

ವಿಧಾನಸೌಧದ ಕೊಠಡಿ ಸಂಖ್ಯೆ 11ರಲ್ಲಿರುವ ಸಚಿವಾಲಯದ ಕಡತಗಳು, ರಿಜಿಸ್ಟರ್‌ಗಳು, ಪೀಠೋಪಕರಣಗಳು ಇತ್ಯಾದಿಗಳನ್ನು ವಿಕಾಸಸೌಧಕ್ಕೆ ಸ್ಥಳಾಂತರಿಸಿ ಕ್ರಮವಾಗಿ ಜೋಡಿಸುವ ಕಾರ್ಯವನ್ನು ಬೆಂಗಳೂರು ಪ್ಯಾಕರ್ಸ್ ಅಂಡ್ ಮೂವರ್ಸ್, ನಂ.2 ರಾಮೇಶ್ವರ ಟೆಂಪಲ್ ಬಿಲ್ಡಿಂಗ್, 1ನೇ ಕ್ರಾಸ್, 3ನೇ ಮೇನ್, ಚಾಮರಾಜಪೇಟೆ, ಬೆಂಗಳೂರು–560018 ಅವರ

ಮೂಲಕ ರೂ. 2,51,776/–ಗಳ (ಎರಡು ಲಕ್ಷ ಐವತ್ತೊಂದು ಸಾವಿರದ ಏಳು ನೂರ ಎಪ್ಪತ್ತಾರು ರೂಪಾಯಿಗಳು ಮಾತ್ರ) ವೆಚ್ಚದಲ್ಲಿ ಕೈಗೊಳ್ಳಲು ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಕಡತಗಳ ಸುರಕ್ಷಿತ ಸಾಗಣೆ ಹಾಗೂ ಜೋಡಣೆಗೆ ಆದ್ಯ ಗಮನ ನೀಡತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.116

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ).

**ವಿಷಯ:** ಹೂವಿನ ಹಡಗಲಿ ವಸ್ತು ಸಂಗ್ರಹಾಲಯ ನಿರ್ಮಾಣ – ಕರ್ನಾಟಕ ಭೂಸೇನಾ ನಿಗಮಕ್ಕೆ ಬಾಕಿ ಹಣ ಪಾವತಿಸಲು ಮಂಜೂರಾತಿ ನೀಡುವ ಬಗ್ಗೆ

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 46 ಸ್ವೀಮರ 2007 ದಿನಾಂಕ: 27–4–2007

2) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ/ಎಸಿಟಿ6/52/2007–08 ದಿನಾಂಕ: 21–11–2007

**ಪ್ರಸ್ತಾವನೆ:**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ 2007–08ನೇ ಸಾಲಿನ ಮುಂದುವರಿದ ಯೋಜನೇತರ ಕಾರ್ಯಕ್ರಮಗಳಿಗೆ ಮಂಜೂರಾತಿ ನೀಡಿ ಹೊರಡಿಸಲ್ಪಟ್ಟ ಮೇಲೆ (1)ರ ಸರ್ಕಾರದ ಆದೇಶದಲ್ಲಿ ಹೂವಿನ ಹಡಗಲಿ ವಸ್ತು ಸಂಗ್ರಹಾಲಯ ಬಾಕಿ ಪಾವತಿಗಾಗಿ ರೂ.12.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರು ಮೇಲೆ (2)ರಲ್ಲಿ ಓದಲಾದ ಅವರ ಪತ್ರದಲ್ಲಿ ಕರ್ನಾಟಕ ಭೂಸೇನಾ ನಿಗಮವು ಹೂವಿನ ಹಡಗಲಿ ವಸ್ತು ಸಂಗ್ರಹಾಲಯದ ನಿರ್ಮಾಣ ಕಾರ್ಯವನ್ನು ಪೂರೈಸಿ 31–1–2000ದಂದು ಇಲಾಖಾಗೆ ಹಸ್ತಾಂತರಿಸಿದ್ದು ಕಳೆದ 7 ವರ್ಷಗಳಿಂದ ವಸ್ತು ಸಂಗ್ರಹಾಲಯವು ಕಾರ್ಯನಿರ್ವಹಿಸುತ್ತಿರುವುದರಿಂದ ನಿಗಮಕ್ಕೆ ಪಾವತಿಸಬೇಕಾದ ಬಾಕಿ ಮೊತ್ತ ರೂ.12.00 ಲಕ್ಷಗಳನ್ನು ಪಾವತಿಸಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 37 ಕೆಎಂಯು 2007 ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2008**

ಬಳ್ಳಾರಿ ಜಿಲ್ಲೆ ಹೂವಿನ ಹಡಗಲಿಯಲ್ಲಿ ನಿರ್ಮಿಸಲಾದ ವಸ್ತು ಸಂಗ್ರಹಾಲಯ ನಿರ್ಮಾಣ ಕಾಮಗಾರಿಯ ಬಾಕಿ ಮೊತ್ತ ರೂ.12.00 ಲಕ್ಷಗಳನ್ನು (ರೂಪಾಯಿ ಹನ್ನೆರಡು ಲಕ್ಷಗಳು ಮಾತ್ರ) ಕರ್ನಾಟಕ ಭೂಸೇನಾ ನಿಗಮಕ್ಕೆ ಪಾವತಿಸಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01–059 (ಯೋಜನೇತರ)ದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಇವರೊಂದಿಗೆ ಸಮಾಲೋಚಿಸಿ ಇಲಾಖೆಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 323

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ).

**ಸಂಖ್ಯೆ: ಕಸಂವಾಪ್ರ 46 ಕೆಎಂಯು 2008, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2008.**

**ತಿದ್ದೋಲೆ**

ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 474 ಕಸಧ 2007 ದಿನಾಂಕ 3–12–2007ರ ಆದೇಶ ಭಾಗವನ್ನು ದಿನಾಂಕ 3–12–2007ರಿಂದಲೇ ಜಾರಿಗೆ ಬರುವಂತೆ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು:–

"ಹಂಪಿ ಉತ್ಸವ–ಖಾಯಂ ಮೂಲಭೂತ ಸೌಕರ್ಯ ಕಲ್ಪಿಸುವ ಸಲುವಾಗಿ ರೂ.30.00 ಲಕ್ಷಗಳನ್ನು (ರೂಪಾಯಿ ಮೂವತ್ತು ಲಕ್ಷಗಳು ಮಾತ್ರ) ಹೆಚ್ಚುವರಿ ಅನುದಾನವಾಗಿ ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಪೇಯೀಸ್ ರಸೀಟ್ ಮೂಲಕ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು

ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ."

1) ಸರ್ಕಾರ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.
2) ಜಾರಿಯಲ್ಲಿರುವ ನಿಯಮಗಳನ್ನು ಪಾಲಿಸುವುದರ ಜೊತೆಗೆ ಸರ್ಕಾರ ಮಂಜೂರು ಮಾಡಿದ ಹಣ ಬಳಕೆ ಮಾಡಿದ ಬಗ್ಗೆ ಲೆಕ್ಕಪಟ್ಟಿ ಹಾಗೂ ಹಣ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
3) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ನಿಯಮ 2000 ಮತ್ತು ಸರ್ಕಾರ ಆಗಿಂದಾಗ್ಗೆ ಹೊರಡಿಸಿದ ಸುತ್ತೋಲೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205–00–103–0–18–101 (ಯೋಜನೇತರ) ಇದರಡಿಯಲ್ಲಿ ಹೆಚ್ಚುವರಿ ಅನುದಾನವಾಗಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ/2089/ವೆಚ್ಚ–5/2007 ದಿನಾಂಕ 3–11–2007ರಲ್ಲಿ ನೀಡಿದ ಸಹಮತಿಯಂತೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.464

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ವಿಷಯ:** ಎಸ್. ನಿಜಲಿಂಗಪ್ಪ ಮೆಮೋರಿಯಲ್ ಟ್ರಸ್ಟ್ ಸ್ಮಾರಕಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ: ಸಂ ಕ ಇ 46 ಸ್ಮಾಪ್ರನಿ 2005 ದಿ: 10–9–2007
2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ: ಕಸನಿ/4/ ಎಸ್.ನಿಜಲಿಂಗಪ್ಪ ಟ್ರಸ್ಟ್/2004–05 ದಿ: 18–12–07.

**ಪ್ರಸ್ತಾವನೆ:**

ಚಿತ್ರದುರ್ಗ ಸಮೀಪದ ಶಿಬಾರಗ್ರಾಮದ ಹತ್ತಿರ ನಿರ್ಮಿಸಲಾಗುತ್ತಿರುವ ನಿಜಲಿಂಗಪ್ಪ ಸ್ಮಾರಕ ನಿರ್ಮಾಣಕ್ಕಾಗಿ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ.100.00 ಲಕ್ಷಗಳನ್ನು ಜಿಲ್ಲಾಧಿಕಾರಿ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಅವರಿಗೆ ಬಿಡುಗಡೆ ಮಾಡಲು ಆಯುಕ್ತರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಅನುಮತಿ ನೀಡಲಾಗಿತ್ತು. ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಈ ಹಿಂದೆ ಸರ್ಕಾರದಿಂದ ಬಿಡುಗಡೆಯಾದ ಅನುದಾನವನ್ನು ಕೆಲವು ಷರತ್ತುಗಳಿಗೆ ಒಳಪಡಿಸಿ ಶ್ರೀ ಎಸ್.ನಿಜಲಿಂಗಪ್ಪ ಮೆಮೋರಿಯಲ್ ಟ್ರಸ್ಟ್‌ನ ಪದಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದ್ದು, ಸದರಿ ಕಾಮಗಾರಿ ಪ್ರಗತಿಯಲ್ಲಿದೆಯೆಂದು ಈ ಹಂತದಲ್ಲಿ ಕಾಮಗಾರಿಯನ್ನು ಬೇರೆ ಅನುಷ್ಠಾನಾಧಿಕಾರಿಗಳಿಗೆ ವಹಿಸಿದಲ್ಲಿ ತಾಂತ್ರಿಕ ಅಡಚಣೆ ಉಂಟಾಗುವುದರೊಡನೆ ಕಾಮಗಾರಿಯು ವಿಳಂಬವಾಗುವ ಸಾಧ್ಯತೆ ಇರುತ್ತದೆ ಎಂಬ ಚಿತ್ರದುರ್ಗ ಜಿಲ್ಲಾಧಿಕಾರಿಗಳ ವರದಿ ಉಲ್ಲೇಖಿಸಿ ಟ್ರಸ್ಟ್ ನವರಿಂದ ಕರಾರು ಪತ್ರ ಪಡೆದು ಲೋಕೋಪಯೋಗಿ ಇಲಾಖೆಯ ಕಾರ್ಯಪಾಲಕ ಅಭ್ಯಂತರರ ಮೇಲುಸ್ತುವಾರಿಯಲ್ಲಿ ಕಾಮಗಾರಿಯನ್ನು ನಿರ್ವಹಿಸುವಂತೆ ಆದೇಶಿಸಿ ಟ್ರಸ್ಟ್‌ಗೆ ಹಣ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿ ಆದೇಶ ಹೊರಡಿಸಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 57 ಸ್ಮಾಪ್ರನಿ 2007, ಬೆಂಗಳೂರು ದಿನಾಂಕ: 07ನೇ ಫೆಬ್ರವರಿ 2008**

ಸರ್ಕಾರಿ ಆದೇಶ ಸಂ: ಸಂಕ ಇ 46 ಸ್ಮಾಪ್ರನಿ 2005 ದಿ: 10–9–2007 ನ್ನು ಮಾರ್ಪಡಿಸಿದ ಸರ್ಕಾರವು ಎಸ್. ನಿಜಲಿಂಗಪ್ಪ ಸ್ಮಾರಕ ನಿರ್ಮಾಣಕ್ಕಾಗಿ ಬಿಡುಗಡೆಯಾದ ರೂ. 100.00 ಲಕ್ಷ (ರೂಪಾಯಿ ಒಂದು ಕೋಟಿ ಮಾತ್ರ) ರೂಪಾಯಿಗಳ ಅನುದಾನವನ್ನು ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಇವರಿಗೆ ಬದಲಾಗಿ ಶ್ರೀ ಎಸ್.ನಿಜಲಿಂಗಪ್ಪ, ಮೆಮೋರಿಯಲ್ ಟ್ರಸ್ಟ್ ಇವರಿಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಿರುತ್ತದೆ.

1. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯಿದೆ 1999 ಹಾಗೂ 2000ದ ನಿಯಮಗಳಲ್ಲಿನ ವಿಧಿವಿಧಾನಗಳನ್ನು ತಪ್ಪದೇ ಪಾಲಿಸತಕ್ಕದ್ದು.
2. ಯಾವ ಉದ್ದೇಶಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಸತಕ್ಕದ್ದು.

3. ಅನುದಾನದ ಸಮರ್ಪಕ ಬಳಕೆಯ ಉಸ್ತುವಾರಿಯನ್ನು ವಹಿಸತಕ್ಕದ್ದು.
4. ಹಣ ಸದ್ವಿನಿಯೋಗವಾಗಿರುವುದಕ್ಕೆ ಹಣಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
5. ಲೋಕೋಪಯೋಗಿ ಇಲಾಖೆಯ ಕಾರ್ಯಪಾಲಕ ಇಂಜಿನಿಯರ್ ಅವರ ಮೇಲುಸ್ತುವಾರಿಯಲ್ಲಿ ಕಾಮಗಾರಿಯನ್ನು ಕೈಗೊಳ್ಳತಕ್ಕದ್ದು.
6. ಸದರಿ ಸ್ಮಾರಕ ನಿರ್ಮಾಣದ ಕಾಮಗಾರಿಯನ್ನು ಆದಷ್ಟು ಶೀಘ್ರವಾಗಿ ಪೂರ್ಣಗೊಳಿಸಿ ಸ್ಮಾರಕವನ್ನು ಸಾರ್ವಜನಿಕ ಉಪಯೋಗಕ್ಕೆ ತೆರೆಯತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–102–5–09–101 (ಯೋಜನೆ) ಇದರಲ್ಲಿ ಭರಿಸತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 264

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ವಿಷಯ:** ಮಾಣಿಕ್ಯವೇಲು ಮ್ಯಾನ್‌ಷನ್ ಕಟ್ಟಡದ ಬಾಡಿಗೆ ಹಣವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ 65 ಕಲಾಗ್ಯಾಲರಿ 06–07 ದಿನಾಂಕ 23–11–2007

**ಪ್ರಸ್ತಾವನೆ:**

ನ್ಯಾಷನಲ್ ಗ್ಯಾಲರಿ ಆಫ್ ಮಾರ್ಡನ್ ಆರ್ಟ್ ಸಂಸ್ಥೆಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ 30 ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡಲಾಗಿದ್ದು ಇದರ ಬಾಡಿಗೆಯನ್ನು ಕರ್ನಾಟಕ ಗೃಹ ಮಂಡಳಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಪಾವತಿಸುತ್ತಿರುವ ಕಾರಣ ಪ್ರತಿ ಸಾಲಿನಂತೆ 2007–08ನೇ ಸಾಲಿಗೂ ಸಹ ಈ ಕಟ್ಟಡದ ಬಾಡಿಗೆ ಮೊತ್ತ ರೂ.30,91,812/– ಗಳನ್ನು ಕರ್ನಾಟಕ ಗೃಹ ಮಂಡಳಿಗೆ ಪಾವತಿಸಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಂಕಇ 80 ಕೆಎಂಯು 2004, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2008**

ಬೆಂಗಳೂರು ಅರಮನೆ ರಸ್ತೆಯಲ್ಲಿರುವ ಮಾಣಿಕ್ಯವೇಲು ಮ್ಯಾನ್‌ಷನ್ ಕಟ್ಟಡದ 2007–08ನೇ ಸಾಲಿನ ಬಾಡಿಗೆ ಮೊತ್ತ ರೂ.30,91,812/– (ರೂಪಾಯಿ ಮೂವತ್ತು ಲಕ್ಷದ ತೊಂಭತ್ತೊಂದು ಸಾವಿರದ ಎಂಟುನೂರ ಹನ್ನೆರಡು ಮಾತ್ರ) ಗಳನ್ನು ಕರ್ನಾಟಕ ಗೃಹಮಂಡಳಿಗೆ ಪಾವತಿಸಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–001–0–01–071 ಕಟ್ಟಡ ವೆಚ್ಚಗಳು (ಯೋಜನೇತರ) ಇದರಲ್ಲಿ ಭರಿಸತಕ್ಕದ್ದು.

ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಇದರೊಂದಿಗೆ ಸಮಾಲೋಚಿಸಿ ಇಲಾಖೆಗೆ ಪ್ರತ್ಯಾಯೋಜಿಸಿದ ಅಧಿಕಾರ ದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.343

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ವಿಷಯ:** ಎಸ್.ಕೆ. ವಾಸುದೇವ, ಪುರಾತತ್ವ ಸಂರಕ್ಷಣಾ ಇಂಜಿನಿಯರ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ – ಮರು ವಿಚಾರಣೆ ಹಾಗೂ ವರದಿಗಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳಿಗೆ ಹಿಂತಿರುಗಿಸುವ ಬಗ್ಗೆ

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 109 ಕೆಎಂಯು 98 ದಿನಾಂಕ 1–6–1999
2) ಶ್ರೀ ಬಿ. ಶ್ರೀನಿವಾಸ ರಾವ್, ನಿವೃತ್ತ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಅವರ ಪತ್ರ ದಿನಾಂಕ 27–10–2007.

**ಪ್ರಸ್ತಾವನೆ:**

ಶ್ರೀ ಎಸ್.ಕೆ. ವಾಸುದೇವ, ಪುರಾತತ್ವ ಸಂರಕ್ಷಣಾ ಇಂಜಿನಿಯರ್ ಅವರು ಅರಮನೆ ಕಟ್ಟಡಗಳ ಉಪವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಅವರು ಅಧಿಕಾರ ವಹಿಸಿಕೊಂಡ ಪೂರ್ವದಲ್ಲಿ ಖರೀದಿಸಲ್ಪಟ್ಟ ಬಿಲ್ಲುಗಳನ್ನು ದೃಢೀಕರಿಸಿ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಸಾವಿರಾರು ರೂಪಾಯಿಗಳ ಸಾಮಗ್ರಿಗಳನ್ನು ಖರೀದಿಸಿದ; ಸುರಾಲು ಅರಮನೆಯ ಸಂರಕ್ಷಣಾ ಕಾರ್ಯದಲ್ಲಿ ಮರವನ್ನು ನಿಯಮಾನುಸಾರ ಖರೀದಿಸದೆ ಸರ್ಕಾರಕ್ಕೆ ನಷ್ಟ ಉಂಟು ಮಾಡಿದ; ಎ.ಸಿ ಬಿಲ್ಲುಗಳ ಮೇಲೆ 1997ರಲ್ಲಿ ಡ್ರಾ ಮಾಡಲಾದ ಐವತ್ತು ಸಾವಿರ ರೂಪಾಯಿಗಳಿಗೆ ಲೆಕ್ಕಪತ್ರಗಳನ್ನು ನೀಡಲು ವಿಫಲರಾದ ಹಾಗೂ ಮೇಲಾಧಿಕಾರಿಗಳ ಹಾಗೂ ಸಹೋದ್ಯೋಗಿಗಳೊಡನೆ ಅಗೌರವಯುತವಾಗಿ ವರ್ತಿಸಿದ ಆರೋಪಗಳಿಗಾಗಿ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ 1–6–1999ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಶ್ರೀ ಬಿ. ಶ್ರೀನಿವಾಸರಾವ್, ನಿವೃತ್ತ ನ್ಯಾಯಾಧೀಶರು, ಮೈಸೂರು ಅವರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ 27–10–2007ರ ವಿಚಾರಣಾ ವರದಿಯನ್ನು ಸಲ್ಲಿಸಿ ಈ ಕೆಳಕಂಡಂತೆ ನಿರ್ಣಯ ನೀಡಿರುತ್ತಾರೆ:

> "ಆರೋಪವನ್ನು ಸಾಬೀತುಪಡಿಸುವುದು ಶಿಸ್ತು ಪ್ರಾಧಿಕಾರಿಯ ಕರ್ತವ್ಯ. ಸಾಕ್ಷ್ಯಗಳನ್ನು ಹಾಜರುಪಡಿಸುವುದು ಶಿಸ್ತುಪ್ರಾಧಿಕಾರಿಯ ಕರ್ತವ್ಯ. ಈ ಪ್ರಕರಣದಲ್ಲಿ ಶಿಸ್ತು ಪ್ರಾಧಿಕಾರಿಯು ಆರೋಪಿ ಅಧಿಕಾರಿಯ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಯಾವುದೇ ಸಾಕ್ಷ್ಯವನ್ನು ಹಾಜರು ಪಡಿಸಲಿಲ್ಲ. ಮಂಡನಾಧಿಕಾರಿಯು ದಿನಾಂಕ 25–8–2007ರಂದು ಒಂದು ಮೆಮೋ ಹಾಜರುಪಡಿಸಿ ಮೂಲ ದಾಖಲೆಗಳನ್ನು ಹಾಜರುಪಡಿಸುವ ಪರಿಸ್ಥಿತಿಯಲ್ಲಿ ತಾನಿಲ್ಲವೆಂದು ಕೇವಲ ದೃಢೀಕರಿಸಲ್ಪಡದ ಜೆರಾಕ್ಸ್ ಪ್ರತಿಗಳು ತನ್ನಲ್ಲಿರುವುದಾಗಿ ತಿಳಿಸಿದ್ದಾರೆ. ಈ ಕಾರಣದಿಂದಾಗಿ ಆರೋಪಗಳು ಸಾಬೀತಾಗಿಲ್ಲ."

ಮೇಲಿನ ವಿಚಾರಣಾಧಿಕಾರಿಗಳ ನಿರ್ಣಯವನ್ನು ಪರಿಶೀಲಿಸಲಾಗಿದೆ. ಈ ಪ್ರಕರಣದಲ್ಲಿ ಮೂಲ ದಾಖಲೆಗಳು ಲಭ್ಯವಿಲ್ಲದಿರುವುದು, ಜೆರಾಕ್ಸ್ ಪ್ರತಿಗಳು ಮಾತ್ರ ಲಭ್ಯವಿದ್ದು ಇವುಗಳ ಬಗ್ಗೆ ಪರಿಶೀಲಿಸಲಾಗಿ ಸರ್ವೋಚ್ಚ ನ್ಯಾಯಾಲಯವು ಆನಂದ ಬಿಹಾರಿ ಲಾಲ್ ವಿರುದ್ಧ ದಿನ್‌ಶಾ ಅಂಡ್ ಕಂಪನಿ ಪ್ರಕರಣದಲ್ಲಿ (ಎಐಆರ್ 1949 ಟಿ.ಸಿ.24) ನೀಡಿರುವ ನಿರ್ಣಯದಂತೆ ಮೂಲ ದಾಖಲೆಗಳು ಲಭ್ಯವಿಲ್ಲದಿದ್ದಾಗ ಲಭ್ಯವಿರುವ ಜೆರಾಕ್ಸ್ ಪ್ರತಿಗಳನ್ನು ದೃಢೀಕರಿಸಿಕೊಂಡು ಇಲಾಖಾ ವಿಚಾರಣೆಯನ್ನು ನಡೆಸಬಹುದೆಂದು ತಿಳಿಸಿದೆ. ಅದರಂತೆ ಈ ಪ್ರಕರಣದಲ್ಲಿ ಲಭ್ಯವಿರುವ ಜೆರಾಕ್ಸ್ ದಾಖಲೆಗಳನ್ನು ದೃಢೀಕರಿಸಿಕೊಂಡು ವಿಚಾರಣೆ ನಡೆಸುವುದರಲ್ಲಿ ಯಾವುದೇ ತೊಡಕು ಇರುವುದಿಲ್ಲ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ:

**ಆದೇಶ ಸಂಖ್ಯೆ: ಸಂಕಇ 109 ಕೆಎಂಯು 1998 (ಭಾಗ–1) ಬೆಂಗಳೂರು, ದಿನಾಂಕ: 15ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ವಾಸ್ತವಾಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(ಎ) ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಪ್ರಕರಣವನ್ನು ಮೇಲಿನ ನಿಬಂಧನೆಗಳನ್ವಯ ಮರುವಿಚಾರಣೆ ನಡೆಸಿ ವರದಿ ಸಲ್ಲಿಸುವ ಸಲುವಾಗಿ ವಿಚಾರಣಾಧಿಕಾರಿಗೆ ಹಿಂತಿರುಗಿಸುತ್ತದೆ (remitted).

ಸದರಿ ನಿರ್ದೇಶನದಂತೆ ದಾಖಲೆಗಳನ್ನು ಹಾಜರುಪಡಿಸಲು ಮಂಡನಾಧಿಕಾರಿ ಯವರು ಕ್ರಮ ಕೈಗೊಳ್ಳುತ್ತಾರೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.313

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ವಿಷಯ:** ಬೆಂಗಳೂರು ವೆಂಕಟಪ್ಪ ಚಿತ್ರಶಾಲೆಯ ನಿರ್ವಹಣೆಗಾಗಿ ಸಲಹಾ ಸಮಿತಿಯನ್ನು ರಚಿಸುವ ಬಗ್ಗೆ

**ಓದಲಾಗಿದೆ:**
1) ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಅಪ್ರಾಸಂಪ/ ವೆಚಿಶಾಲೆ/2007–08/223 ದಿನಾಂಕ 20–9–2006
2) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ/ಆಸ/ಇತರೆ/2006–07 ದಿನಾಂಕ 3–9–2007

**ಪ್ರಸ್ತಾವನೆ:**

ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು ಹಾಗೂ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರುಗಳು ಮೇಲೆ (1) ಮತ್ತು (2)ರಲ್ಲಿ ಓದಲಾದ ಅವರ

ಪತ್ರಗಳಲ್ಲಿ ಬೆಂಗಳೂರು ವೆಂಕಟಪ್ಪ ಚಿತ್ರಶಾಲೆಯು ಪ್ರಮುಖವಾಗಿ ಚಿತ್ರಕಲಾ ಪ್ರದರ್ಶನಕ್ಕೆ ಮೀಸಲಾಗಿರುವುದರಿಂದ ಚಿತ್ರಕಲೆ ಪರಿಣಿತರು, ಕಲಾವಿದರನ್ನು ಒಳಗೊಂಡ ಸಲಹಾ ಸಮಿತಿಯನ್ನು ರಚಿಸುವುದು ಅಗತ್ಯವೆಂದು ತಿಳಿಸಿ ಅದರಂತೆ ಒಂದು ಸಲಹಾ ಸಮಿತಿಯನ್ನು ರಚಿಸಿ ಸರ್ಕಾರಿ ಆದೇಶವನ್ನು ಹೊರಡಿಸಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 127 ಕೆಎಂಯು 2007 ಬೆಂಗಳೂರು, ದಿನಾಂಕ 22ನೇ ಡಿಸೆಂಬರ್ 2007**

ಬೆಂಗಳೂರು, ವೆಂಕಟಪ್ಪ ಚಿತ್ರಶಾಲೆಯ ನಿರ್ವಹಣೆಗಾಗಿ ಸರ್ಕಾರವು ಈ ಕೆಳಕಂಡ ಅಧಿಕಾರಿಗಳು ಮತ್ತು ಕಲಾವಿದರನ್ನು ಒಳಗೊಂಡ ಸಲಹಾ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸುತ್ತದೆ:

| | | |
|---|---|---|
| 1. | ಸರ್ಕಾರದ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ | ಅಧ್ಯಕ್ಷರು |
| 2. | ಶ್ರೀ ಎಸ್.ಜಿ.ವಾಸುದೇವ್, ಕಲಾವಿದರು, ಬೆಂಗಳೂರು | ಸದಸ್ಯರು |
| 3. | ಶ್ರೀಮತಿ ಪುಷ್ಪಮಾಲ, ಕಲಾವಿದರು, ಬೆಂಗಳೂರು | ಸದಸ್ಯರು |
| 4. | ಶ್ರೀಮತಿ ಅನಿಲ್ ಕುಮಾರ್, ಕಲಾವಿದರು, ಬೆಂಗಳೂರು | ಸದಸ್ಯರು |
| 5. | ಶ್ರೀ ಅನಿಲ್ ಕುಮಾರ್, ಕಲಾವಿದರು, ಬೆಂಗಳೂರು | ಸದಸ್ಯರು |
| 6. | ಶ್ರೀ ಎಂ.ಎಸ್.ಮೂರ್ತಿ, ಕಲಾವಿದರು, ಬೆಂಗಳೂರು | ಸದಸ್ಯರು |
| 7. | ಶ್ರೀ ಎಂ.ಜಿ.ದೊಡ್ಡಮನಿ, ಕಲಾವಿದರು, ಬೆಂಗಳೂರು | ಸದಸ್ಯರು |
| 8. | ಶ್ರೀಮತಿ ಎಂ.ಶಾಂತಾಮಣಿ, ಕಲಾವಿದರು, ಬೆಂಗಳೂರು | ಸದಸ್ಯರು |
| 9. | ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು | ಸದಸ್ಯರು |
| 10. | ಉಪನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಬೆಂಗಳೂರು | ಸದಸ್ಯರು |
| 11. | ಸಹಾಯಕ ನಿರ್ದೇಶಕರು, ಸರ್ಕಾರಿ ವಸ್ತು ಸಂಗ್ರಹಾಲಯ ಮತ್ತು ವೆಂಕಟಪ್ಪ ಚಿತ್ರಶಾಲೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |

ಸಮಿತಿಯು ವರ್ಷದಲ್ಲಿ ಕನಿಷ್ಟ ಎರಡು ಬಾರಿಯಾದರೂ ಸಭೆ ಸೇರಿ ವೆಂಕಟಪ್ಪ ಚಿತ್ರಶಾಲೆಯ ನಿರ್ವಹಣೆಗೆ ಸಂಬಂಧಪಟ್ಟಂತೆ ಮಾರ್ಗದರ್ಶನ, ಸಲಹೆ, ಸೂಚನೆ ಇತ್ಯಾದಿಗಳನ್ನು ನೀಡುವುದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.43

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ).

**ವಿಷಯ:** ಬೀದರ್ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ತಜ್ಞರ ಸಮಿತಿಯ ಕಾಲಾವಧಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 114 ಕೆಎಂಯು 2004 ದಿ: 9–12–2005.

2) ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ರವರ ಪತ್ರ ಸಂಖ್ಯೆ: ಆಪ್ರಾಸಂಪ/ಇಎಸ್‌ಟಿ/ಬಿತಸ/2007–08/320 ದಿ:30.11.2007

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬೀದರ್ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಹಾಗೂ ಸಂರಕ್ಷಣೆಗಾಗಿ ತಜ್ಞರ ಸಮಿತಿಯನ್ನು ರಚಿಸಲಾಗಿದ್ದು ಸಮಿತಿಯ ಕಾಲಾವಧಿಯನ್ನು ಒಂದು ವರ್ಷದ ಅವಧಿಗೆ ನಿಗದಿಗೊಳಿಸಲಾಗಿದೆ. ಆಯುಕ್ತರು, ಪ್ರಾ:ವ:ಸಂ: ಪರಂಪರೆ ಇಲಾಖೆ ಅವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಸದರಿ ತಜ್ಞರ ಸಮಿತಿಯನ್ನು ಜಿಲ್ಲಾಧಿಕಾರಿಗಳು ಬೀದರ್ ಜಿಲ್ಲೆ ಅವರು ಮುಂದುವರಿಸಲು ಸಹಮತಿ ನೀಡಿದ್ದು ಹಾಲಿ ಇರುವ ತಜ್ಞರ ಸಮಿತಿಯನ್ನು ಕನಿಷ್ಟ ಎರಡು ವರ್ಷಗಳ ಅವಧಿಗೆ ಪುನರ್ ರಚಿಸಿ ಸರ್ಕಾರದ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 144 ಕೆಎಂಯು 2007 ಬೆಂಗಳೂರು, ದಿನಾಂಕ: 31ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬೀದರ್ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ಸರ್ಕಾರದ ಆದೇಶ ಸಂಖ್ಯೆ: ಸಂಕಇ 114 ಕೆಎಂಯು 2004 ದಿನಾಂಕ 9–12–2005ರಲ್ಲಿ ರಚಿಸಿರುವ ತಜ್ಞರ ಸಮಿತಿಯನ್ನು ದಿನಾಂಕ 9–12–2006ರಿಂದ ಎರಡು ವರ್ಷಗಳ ಅವಧಿಗೆ ಮುಂದುವರಿಸಿ ಆದೇಶಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 236

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ).

**ವಿಷಯ:** ಕಿತ್ತೂರು ಪಾರಂಪರಿಕ ಪ್ರದೇಶದ ಅಭಿವೃದ್ಧಿ ಹಾಗೂ ಸಂರಕ್ಷಣೆಗೆ ರಚಿಸಲಾದ ತಜ್ಞರ ಸಮಿತಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ; ಸಂಕ ಇ 133 ಕೆಎಂಯು 2004 ದಿ: 9–12–05
2. ಆಯುಕ್ತರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಬೆಂಗಳೂರು ಅವರ ಪತ್ರ ಸಂ: ಆಪ್ರಾಸಂಪಇ/ಇಎಸ್ ಟಿ/ಕಿತಸ/2007–08/227 ದಿ: 22–9–2007

**ಪ್ರಸ್ತಾವನೆ:**

ಕಿತ್ತೂರು ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ಮೇಲೆ 1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ತಜ್ಞರ ಸಮಿತಿಯನ್ನು ಬೆಳಗಾವಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಒಂದು ವರ್ಷದ ಅವಧಿಗೆ ರಚಿಸಲಾಗಿತ್ತು. ಆಯುಕ್ತರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ತಜ್ಞರ ಸಮಿತಿಯಲ್ಲಿರುವ ಅಧಿಕಾರೇತರ ಸದಸ್ಯರು ಕಿತ್ತೂರು ಪಾರಂಪರಿಕ ಪ್ರದೇಶದ ಸಂರಕ್ಷಣೆ ಹಾಗೂ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ಬಹಳ ಆಸಕ್ತಿಯಿಂದ ಕಾರ್ಯ ನಿರ್ವಹಿಸುತ್ತಿದ್ದು ಉತ್ತಮವಾದ ಸಲಹೆ ಮತ್ತು ಸಹಕಾರವನ್ನು ನೀಡುತ್ತಿದ್ದಾರೆ ಎಂದು ತಿಳಿಸಿ ಸದರಿ ಸಮಿತಿಯ ಅವಧಿಯು 9–12–2006 ರಂದು ಮುಕ್ತಾಯಗೊಂಡಿದ್ದು ಸಮಿತಿಯನ್ನು ಅಂದಿನಿಂದ ಎರಡು ವರ್ಷಗಳ ಅವಧಿಗೆ ಮುಂದುವರಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 146 ಕೆಎಂಯು 2007, ಬೆಂಗಳೂರು ದಿನಾಂಕ: 06ನೇ ಫೆಬ್ರವರಿ 2008**

ಕಿತ್ತೂರು ಪಾರಂಪರಿಕ ಪ್ರದೇಶದ ಅಭಿವೃದ್ಧಿ ಹಾಗೂ ಸಂರಕ್ಷಣೆಗಾಗಿ, ಸರ್ಕಾರದ ಆದೇಶ ಸಂ: ಸಂಕ ಇ 133 ಕೆಎಂಯು 2004 ದಿನಾಂಕ: 9–12–2005 ರಲ್ಲಿ ರಚಿಸಲಾಗಿದ್ದ ತಜ್ಞರ ಸಮಿತಿಯನ್ನು ದಿ: 9–12–2006 ರಿಂದ ಜಾರಿಗೆ ಬರುವಂತೆ ಎರಡು ವರ್ಷಗಳ ಅವಧಿಗೆ ವಿಸ್ತರಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 266

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ).

**ವಿಷಯ:** ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ 2007–08ನೇ ಸಾಲಿನ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 152 ಕೆಎಂಯು 2007 ದಿ: 30–6–2007 ಮತ್ತು 2–8–2007
2) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ/ಎಸಿಟಿ/1/42/2007–08 ದಿನಾಂಕ 7–12–2007

**ಪ್ರಸ್ತಾವನೆ:**

ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರದ ಸಿಬ್ಬಂದಿ ವೇತನಕ್ಕಾಗಿ 2007–08ನೇ ಸಾಲಿಗೆ ನಿಗದಿಪಡಿಸಿದ ರೂ.26 ಲಕ್ಷಗಳ ಪೈಕಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ.8 ಲಕ್ಷಗಳನ್ನು ಬಿಡುಗಡೆ ಮಾಡಲಾಗಿತ್ತು. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ಅವರ ಪತ್ರದಲ್ಲಿ ಪ್ರಾಧಿಕಾರದ ಆಯುಕ್ತರು ಬಿಡುಗಡೆ ಮಾಡಿದ ಹಣಕ್ಕೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿದ್ದು ಪ್ರಾಧಿಕಾರಕ್ಕೆ ಎರಡನೇ ಕಂತಿನ ಹಣ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 152 ಕೆಎಂಯು 2007, ಬೆಂಗಳೂರು, ದಿನಾಂಕ 20ನೇ ಫೆಬ್ರವರಿ 2008**

ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರದ 2007–08ನೇ ಸಾಲಿನ ಸಿಬ್ಬಂದಿ ವೇತನಕ್ಕಾಗಿ ನಿಗದಿಪಡಿಸಿದ ರೂ.26 ಲಕ್ಷಗಳಲ್ಲಿ ಎರಡನೇ ಕಂತಿನ ಮೊತ್ತ ರೂ.18 ಲಕ್ಷಗಳನ್ನು (ರೂಪಾಯಿ ಹದಿನೆಂಟು ಲಕ್ಷಗಳು ಮಾತ್ರ) ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಪೇಯೀಸ್ ರಸೀತ್ ಮೂಲಕ ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–18 (ಯೋಜನೇತರ) 101 ರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರೊಡನೆ ಸಮಾಲೋಚಿಸಿ ಇಲಾಖೆಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 342

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ವಿಷಯ:** ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರ, ಕೆಳದಿ ಇವರಿಗೆ 2007–08ನೇ ಸಾಲಿನಲ್ಲಿ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 158 ಕೆಎಂಯು 2007 ದಿನಾಂಕ 17–9–2007

2) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ/ಎಸ್‌ಟಿ1/9/2007–08 ದಿನಾಂಕ 14–1–2008

**ಪ್ರಸ್ತಾವನೆ:**

ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರದ ನಿರ್ವಹಣೆಗೆ 2007–08ನೇ ಸಾಲಿನಲ್ಲಿ ನಿಗದಿಪಡಿಸಿದ್ದ ರೂ.7.63 ಲಕ್ಷಗಳ ಪೈಕಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೊದಲನೇ ಕಂತಾಗಿ ರೂ.2.54 ಲಕ್ಷಗಳನ್ನು ಕುವೆಂಪು ವಿಶ್ವವಿದ್ಯಾನಿಲಯಕ್ಕೆ ಬಿಡುಗಡೆ ಮಾಡಲಾಗಿತ್ತು. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರು ಮೇಲೆ (2)ರಲ್ಲಿ ಓದಲಾದ ಅವರ ಪತ್ರದಲ್ಲಿ ವಿಶ್ವವಿದ್ಯಾನಿಲಯವು ಸದರೀ ಮೊತ್ತವನ್ನು ವೆಚ್ಚ ಮಾಡಿ ಹಣಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿರುವುದರಿಂದ ಉಳಿದ ಮೊತ್ತ ರೂ.5.09 ಲಕ್ಷಗಳನ್ನು ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 158 ಕೆಎಂಯು 2007 ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2008**

ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಸಂಸ್ಥೆ, ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇದರ ವಾರ್ಷಿಕ ನಿರ್ವಹಣೆ ಹಾಗೂ ಸಿಬ್ಬಂದಿ ವೇತನಗಳಿಗಾಗಿ 2007–08ನೇ ಸಾಲಿನ ಎರಡನೇ ಕಂತಾಗಿ ರೂ.5.09 ಲಕ್ಷಗಳನ್ನು (ಐದು ಲಕ್ಷ ಒಂಭತ್ತು ಸಾವಿರ ರೂಪಾಯಿಗಳು ಮಾತ್ರ) ಕುವೆಂಪು ವಿಶ್ವವಿದ್ಯಾನಿಲಯ, ಶಿವಮೊಗ್ಗ ಇವರಿಗೆ ಪೇಯೀಸ್ ರಸೀತಿ ಮೂಲಕ ಈ ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

1) ಸರ್ಕಾರಿ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕೆ ಬಳಸುವುದು.
2) ಸರ್ಕಾರ ಮಂಜೂರು ಮಾಡಿದ ಹಣ ಸಮರ್ಪಕವಾಗಿ ಬಳಕೆಯಾದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವುದು.
3) ಕಾರ್ಯಚಟುವಟಿಕೆಗಳ ಬಗ್ಗೆ ಅನುಪಾಲನಾ ವರದಿ ಸಲ್ಲಿಸುವುದು.

ಈ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ)–101– ಸಹಾಯಾನುದಾನ ಇದರ ಅಡಿಯಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರೊಡನೆ ಸಮಾಲೋಚಿಸಿದ ನಂತರ ಇಲಾಖೆಗೆ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.458

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ವಿಷಯ:** ಗದಗ್ ಹಾಗೂ ಬಸವಕಲ್ಯಾಣ ವಸ್ತು ಸಂಗ್ರಹಾಲಯಗಳ ಕಟ್ಟಡ ಕಾಮಗಾರಿ – ಕರ್ನಾಟಕ ರಾಜ್ಯ ನಿರ್ಮಾಣ ನಿಗಮಕ್ಕೆ ಅಂತಿಮ ಬಿಲ್ಲಿನ ಬಾಕಿ ಹಣವನ್ನು ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂ:ಕಸಂವಾಪ್ರ 46 ಸ್ವೀಮರ 2007 ದಿ: 27–4–07

2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಮೈಸೂರು ಅವರ ಪತ್ರ ಸಂ: : ಡಿಎಎಂ/ಎಸಿಟಿ/6/5–4./2007–08 ದಿ: 8–6–07 ಹಾಗೂ 1–11–2007

**ಪ್ರಸ್ತಾವನೆ:**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ 2007–08ನೇ ಸಾಲಿನ ಮುಂದುವರಿದ ಯೋಜನೆಗಳಿಗೆ ಅನುಮೋದನೆ ನೀಡಲ್ಪಟ್ಟ ಮೇಲೆ (1)ರಲ್ಲಿ ಓದಲಾದ ದಿ: 27–4–2007ರ ಸರ್ಕಾರಿ ಆದೇಶದಲ್ಲಿ ಗದಗ ಹಾಗೂ ಬಸವ ಕಲ್ಯಾಣ ವಸ್ತು ಸಂಗ್ರಹಾಲಯದ ನಿರ್ಮಾಣ ಕಾಮಗಾರಿಯ ಬಾಕಿ ಪಾವತಿಗಾಗಿ ರೂ.11.76 ಲಕ್ಷ ರೂ.ಗಳನ್ನು ನಿಗಧಿಪಡಿಸಲಾಗಿದೆ. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ದಿ: 8–6–2007 ಹಾಗೂ 1–11–2007ರ ಪತ್ರಗಳಲ್ಲಿ ಕರ್ನಾಟಕ ರಾಜ್ಯ ನಿರ್ಮಾಣ ನಿಗಮವು ಗದಗ ಮತ್ತು ಬಸವ ಕಲ್ಯಾಣ ವಸ್ತು ಸಂಗ್ರಹಾಲಯಗಳ ನಿರ್ಮಾಣ ಕಾಮಗಾರಿ ಪೂರ್ಣಗೊಳಿಸಿ 17 ರಲ್ಲಿ ಇಲಾಖೆಗೆ ಕಟ್ಟಡವನ್ನು ಹಸ್ತಾಂತರಿಸಿದ್ದು ಸದರೀ ವಸ್ತು ಸಂಗ್ರಹಾಲಯಗಳು ಸಂದರ್ಶಕರಿಗಾಗಿ ತೆರೆಯಲ್ಪಟ್ಟಿದೆ. ಆದ್ದರಿಂದ ನಿಗಮಕ್ಕೆ ಬಾಕಿ ಹಣ ರೂ.11.76 ಲಕ್ಷ ರೂ.ಗಳನ್ನು ಪಾವತಿಸಬೇಕಿರುವ ಕಾರಣ ಸದರಿ ಮೊತ್ತವನ್ನು ಪಾವತಿಸಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 164 ಕೆಎಂಯು 2007, ಬೆಂಗಳೂರು ದಿನಾಂಕ: 26ನೇ ಡಿಸೆಂಬರ್ 2007**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ ಗದಗ ಮತ್ತು ಬಸವಕಲ್ಯಾಣ ವಸ್ತು ಸಂಗ್ರಹಾಲಯಗಳ ನಿರ್ಮಾಣ ಕಾಮಗಾರಿ ಸಂಬಂಧ ಕರ್ನಾಟಕ ರಾಜ್ಯ ನಿಮಾಣ ನಿಗಮಕ್ಕೆ ಬಾಕಿ ಮೊತ್ತ ರೂ.11.76 ಲಕ್ಷಗಳನ್ನು ಪಾವತಿ ಮಾಡಲು ನಿರ್ದೇಶಕರು, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು ಅವರಿಗೆ ಈ ಮೂಲಕ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಸಂಬಂಧದ ವೆಚ್ಚವನ್ನು 2007–08ನೇ ಆಯವ್ಯಯ ಸಾಲಿನ ಲೆಕ್ಕಶೀರ್ಷಿಕೆ 2205–00–103–0–01–05 ಯೋಜನೇತರದಲ್ಲಿ ಭರಿಸತಕ್ಕದ್ದು.

ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ ವಾರ್ತಾ, ಪ್ರವಾಸೋದ್ಯಮ ಇಲಾಖೆ ಅವರ ಸಹಮತಿಯನ್ನು ಅ.ಟ.ಸಂ:ಶಿಇ 54 ಐಎಫ್ ಬಿಎ) 2007 ದಿ: 16–8–07 ರಲ್ಲಿ ಪಡೆದು ಹಾಗೂ ಸರ್ಕಾರಿ ಆದೇಶ ಸಂ: ಎಫ್ ಡಿ 1 ಟಿಎಫ್ ಡಿ 1 ಟಿಎಫ್ ಪಿ 6 ದಿ: 10–7–96 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.51

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ).

**ವಿಷಯ:** ರಾಷ್ಟ್ರೀಯ ಸೇವಾ ಯೋಜನೆಯ ಸಹಯೋಗದೊಡನೆ ಐತಿಹಾಸಿಕ ಸ್ಮಾರಕಗಳ ಪ್ರಾಥಮಿಕ ಸಂರಕ್ಷಣಾ ಕಾರ್ಯವನ್ನು ಕೈಗೊಳ್ಳಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂ: ಕಸಂವಾಪ್ರ 46 ಸ್ವೀಮರ 07 ದಿ: 27–4–07

2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ಮೈಸೂರು ಅವರ ಪತ್ರ: ಡಿಎಎಂ/ ಎ.ಸಿ.ಟಿ1./21/2007–08 ದಿ: 16–10–07

**ಪ್ರಸ್ತಾವನೆ:**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ 2007–08ನೇ ಯೋಜನೇತರ ಕಾಮಗಾರಿಗಳಿಗೆ ಅನುಮೋದನೆ ನೀಡಿ ಹೊರಡಿಸಲ್ಪಟ್ಟ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬಾಗಲಕೋಟೆ ತಾಲ್ಲೂಕು ಮಂಕಣಿ ಗ್ರಾಮದ ರಾಷ್ಟ್ರಕೂಟರ ಸ್ಮಾರಕಗಳ ಸಂರಕ್ಷಣೆಗಾಗಿ ರೂ.2.2 ಲಕ್ಷಗಳನ್ನು ನಿಗಧಿಪಡಿಸಲಾಗಿತ್ತು. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು ಅವರು ಮೇಲೆ (2)ರಲ್ಲಿ ತಮ್ಮ ಪತ್ರದಲ್ಲಿ ಸದರಿ ಸ್ಮಾರಕಗಳ ಸಂರಕ್ಷಣೆಯನ್ನು 12ನೇ ಹಣಕಾಸು ಆಯೋಗದ ಅನುದಾನದಲ್ಲಿ ಕೈಗೊಳ್ಳುತ್ತಿರುವ ಕಾರಣ ಇದಕ್ಕೆ ನಿಗಧಿಪಡಿಸಿರುವ ರೂ. 2.52 ಲಕ್ಷಗಳಲ್ಲಿ ಇಲಾಖೆಯ ಬೆಂಗಳೂರು, ಮಂಗಳೂರು, ಹಂಪಿ (ಕಮಲಾಪುರ) ಹಾಗೂ ಧಾರವಾಡ ಉಪನಿರ್ದೇಶಕರುಗಳ ವ್ಯಾಪ್ತಿಯಲ್ಲಿ ಒಂದು ಸ್ಮಾರಕ್ಕೆ ರೂ. 3 ಸಾವಿರಗಳಂತೆ ಪ್ರತಿ ಉಪನಿರ್ದೇಶಕರ ವ್ಯಾಪ್ತಿಯಲ್ಲಿ ರೂ. 63,000/–ಗಳಲ್ಲಿ 21 ಸ್ಮಾರಕಗಳಂತೆ ಒಟ್ಟು

ರೂ.2.52.000/- ಗಳ ವೆಚ್ಚದಲ್ಲಿ ಐತಿಹಾಸಿಕ ಸ್ಮಾರಕಗಳ ಪ್ರಾಥಮಿಕ ಸಂರಕ್ಷಣೆಯನ್ನು ರಾಷ್ಟ್ರೀಯ ಸೇವಾ ಯೋಜನೆಯ ಸಹಯೋಗದೊಂದಿಗೆ ಕೈಗೊಳ್ಳಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ. ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 204 ಕೆಎಂಯು 2007, ಬೆಂಗಳೂರು ದಿನಾಂಕ: 4ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ ನಾಲ್ಕು ಮಂದಿ ಉಪನಿರ್ದೇಶಕರುಗಳ ವ್ಯಾಪ್ತಿಯಲ್ಲಿ ಬರುವ ಒಟ್ಟು 84 ಐತಿಹಾಸಿಕ ಸ್ಮಾರಕಗಳ ಪ್ರಾಥಮಿಕ ಸಂರಕ್ಷಣಾ ಕಾರ್ಯವನ್ನು ರಾಷ್ಟ್ರೀಯ ಸೇವಾ ಯೋಜನೆಯ ಸಹಯೋಗದೊಡನೆ ರೂ. 2.52 ಲಕ್ಷಗಳ ವೆಚ್ಚದಲ್ಲಿ ಕೈಗೊಳ್ಳಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು ಅವರಿಗೆ ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 2007-08ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2205-00-103-0-01-059 (ಯೋಜನೇತರ) ರಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ ವಾರ್ತಾ, ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರೊಂದಿಗೆ ಸಮಾಲೋಚಿಸಿ ಇಲಾಖೆಗೆ ಪ್ರದತ್ತವಾದ ಆರ್ಥಿಕ ಅಧಿಕಾರದ ಪ್ರತ್ಯಾಯೋಜನೆಯನ್ವಯ ಈ ಆದೇಶವನ್ನು ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.265

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ).

**ವಿಷಯ:** ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸಂಬಂಧಿಸಿದಂತೆ ಮುಂದುವರಿದ ಯೋಜನಾ ಕಾರ್ಯಕ್ರಮದಡಿಯಲ್ಲಿ 2007-08ನೇ ಸಾಲಿನ ಹೊಸ ಘಟಕಗಳಲ್ಲಿ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ಪುರಾತತ್ವ ಸಂರಕ್ಷಣಾ ಅಭಿಯಂತರರ ಹುದ್ದೆಯನ್ನು ಸೃಜಿಸುವ ಕುರಿತು.

**ಓದಲಾಗಿದೆ:**
1) ದಿನಾಂಕ 7-7-2007ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿಯ ಸಭೆಯ ನಡೆವಳಿಗಳು
2) ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 70 ಸ್ವೀಮರ 2007 ದಿ: 18-8-2007
3) ಪತ್ರ ಸಂಖ್ಯೆ: ಅಪ್ರಾಸಂಪ:ಇಎಸ್‌ಟಿ:ಹುಭ/2007-08/193 ದಿ: 29-8-2007 ಮತ್ತು ದಿನಾಂಕ 1-9-2007ಕ್ಕೆ ಅಂತ್ಯಗೊಂಡ ಪತ್ರ ವ್ಯವಹಾರ

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 7-7-2007ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಗಳಲ್ಲಿ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯಲ್ಲಿ ಮಂಜೂರಾಗಿದ್ದ ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಯನ್ನು ಅಧ್ಯರ್ಪಿಸಿ ಅದರ ಬದಲಿಗೆ ಒಂದು ಪುರಾತತ್ವ ಸಂರಕ್ಷಣಾ ಸಹಾಯಕ ಹುದ್ದೆಯನ್ನು ಸೃಜಿಸಲು ಅನುಮೋದನೆ ನೀಡಲಾಗಿದೆ. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ಮಂಜೂರಾಗಿದ್ದ ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಯನ್ನು ಅಧ್ಯರ್ಪಿಸಿ ಅದರ ಬದಲಿಗೆ ಒಂದು ಪುರಾತತ್ವ ಸಂರಕ್ಷಣಾ ಅಭಿಯಂತರ ಹುದ್ದೆ ಸೃಜಿಸಲು ಅನುಮೋದನೆ ನೀಡಲಾಗಿದೆ.

ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಅವರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ದಿನಾಂಕ 7-7-2007ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಯನ್ವಯ ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 70 ಸ್ವೀಮರ 2007 ದಿನಾಂಕ 18-8-2007ರಲ್ಲಿ ಇಲಾಖೆಯಲ್ಲಿ ಸೃಜಿಸಲಾಗಿರುವ ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಯನ್ನು ಅಧ್ಯರ್ಪಿಸಿ ಅದರ ಬದಲಿಗೆ ಒಂದು ಪುರಾತತ್ವ ಸಂರಕ್ಷಣಾ ಅಭಿಯಂತರರ ಹುದ್ದೆಯನ್ನು ಸೃಜಿಸಲು ಆದೇಶಿಸಲಾಗಿದ್ದು ಅದರಂತೆ ಪ್ರಸ್ತುತ ಇಲಾಖೆಯಲ್ಲಿ ಮಂಜೂರಾಗಿದ್ದ ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಯನ್ನು ಅಧ್ಯರ್ಪಿಸಲಾಗಿದ್ದು ಇದರ ಬದಲಿಗೆ ಒಂದು ಪುರಾತತ್ವ ಸಂರಕ್ಷಣಾ ಅಭಿಯಂತರರ ಹುದ್ದೆಯನ್ನು ಲೋಕೋಪಯೋಗಿ ಇಲಾಖೆ, ಇತರೆ ಸರ್ಕಾರಿ ಇಲಾಖೆ ಅಥವಾ ನಿಗಮಗಳಿಂದ ನಿಯೋಜನೆ ಮೆರೆಗೆ ಪಡೆಯಲು ಕೋರಿರುತ್ತಾರೆ. ಹಾಗೂ ಲೋಕೋಪಯೋಗಿ ಇಲಾಖೆಯಿಂದ ನಿಯೋಜನೆಯ ಮೇರೆಗೆ ನೇಮಿಸುವಾಗ ವೇತನ ಮತ್ತಿತರ ಭತ್ಯೆಗಳನ್ನು ಲೆಕ್ಕಶೀರ್ಷಿಕೆ 2205-00-103-0-21 (ಯೋಜನೆ) ಇದರಡಿಯಲ್ಲಿ ವೆಚ್ಚ ಭರಿಸ ಬೇಕಾಗುತ್ತದೆಂದು ಬಾಹ್ಯ ಮೂಲದಿಂದ ಅಭ್ಯರ್ಥಿಯನ್ನು ನೇಮಕ ಮಾಡಿದಲ್ಲಿ ವೇತನವನ್ನು ಲೆಕ್ಕಶೀರ್ಷಿಕೆ 2205-00-103-0-21 (ಯೋಜನೆ) 059-ಇತರೆ ವೆಚ್ಚದ ಅಡಿಯಲ್ಲಿ ಭರಿಸಬೇಕಾಗುವುದೆಂದು

ತಿಳಿಸಿರುತ್ತಾರೆ ಹಾಗೂ ಪುರಾತತ್ವ ಸಂರಕ್ಷಣಾ ಅಭಿಯಂತರರ ಅಭ್ಯರ್ಥಿಯನ್ನು ಲೋಕೋಪಯೋಗಿ ಇಲಾಖೆಯಿಂದ ನಿಯೋಜನೆ ಮೇರೆಗೆ ಪಡೆಯಲು ಅಥವಾ ಬಾಹ್ಯ ಮೂಲದಿಂದ ನೇಮಿಸಿಕೊಳ್ಳಲು ಪುರಾತತ್ವ ಸಂರಕ್ಷಣಾ ಅಭಿಯಂತರರ ಹುದ್ದೆಯನ್ನು ಸೃಜನೆ ಮಾಡಿ ಸರ್ಕಾರದ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 267 ಕೆಎಂಯು 2007 ಬೆಂಗಳೂರು, ದಿನಾಂಕ 31ನೇ ಜನವರಿ 2008**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸಂಬಂಧಿಸಿದಂತೆ ಮುಂದುವರಿದ ಯೋಜನಾ ಕಾರ್ಯಕ್ರಮದಡಿಯಲ್ಲಿ 2007-08ನೇ ಹೊಸ ಘಟಕಗಳಿಗೆ ಹುದ್ದೆಗಳ ಸೃಜನೆಗೆ ಸಂಬಂಧಿಸಿದಂತೆ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ಅಧ್ಯರ್ಪಿಸಲಾಗಿರುವ ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಗೆ ಬದಲಾಗಿ ಒಂದು ಪುರಾತತ್ವ ಸಂರಕ್ಷಣಾ ಇಂಜಿನಿಯರ್ ಹುದ್ದೆಯನ್ನು ವೇತನ ಶ್ರೇಣಿ ರೂ.14050-25050ರಲ್ಲಿ ಸೃಜಿಸಲಾಗಿದೆ. ಈ ಹುದ್ದೆಗೆ ಲೋಕೋಪಯೋಗಿ ಇಲಾಖೆಯಿಂದ ನಿಯೋಜನೆಯ ಮೇರೆಗೆ ಅಭ್ಯರ್ಥಿಯನ್ನು ಪಡೆಯಬಹುದು. ನಿಯೋಜನೆಯ ಮೇರೆಗೆ ಪಡೆದ ಅಭ್ಯರ್ಥಿಯ ವೇತನ ಮತ್ತಿತರ ಭತ್ಯೆಗಳನ್ನು ಲೆಕ್ಕಶೀರ್ಷಿಕೆ 2205-00-103-0-21 (ಯೋಜನೆ) ಇದರಡಿಯಲ್ಲಿ ಭರಿಸತಕ್ಕದ್ದು. ನಿಯೋಜನೆಯ ಮೇರೆಗೆ ಅರ್ಹ ಅಭ್ಯರ್ಥಿಯು ಲಭ್ಯವಾಗದಿದ್ದಲ್ಲಿ ಬಾಹ್ಯ ಮೂಲದಿಂದ ಅಭ್ಯರ್ಥಿಯನ್ನು ನೇಮಕಾತಿ ಮಾಡಿಕೊಳ್ಳಬಹುದು. ಬಾಹ್ಯ ಮೂಲದಿಂದ ನೇಮಕಾತಿ ಮಾಡಿಕೊಳ್ಳುವ ಅಭ್ಯರ್ಥಿಯ ವೇತನವನ್ನು ಲೆಕ್ಕಶೀರ್ಷಿಕೆ 2205-00-103-0-21 (ಯೋಜನೆ) 059-ಇತರೆ ವೆಚ್ಚಗಳ ಅಡಿಯಲ್ಲಿ ಭರಿಸತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.263

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ವಿಷಯ:** ಕಾ.ತ. ಚಿಕ್ಕಣ್ಣ, ಜಂಟಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರಿಗೆ ಬೆಂಗಳೂರು-ಮುಂಬಯಿ ನಡುವೆ ವಿಮಾನ ಪ್ರಯಾಣ ಮಾಡಲು ಅನುಮತಿ ನೀಡುವ ಬಗ್ಗೆ

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಸನಿ 66 ಸಿಬ್ಬಂದಿ/2007-08 ದಿನಾಂಕ 20-12-2007

**ಪ್ರಸ್ತಾವನೆ:**

ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ 20-12-2007ರ ಪತ್ರದಲ್ಲಿ ಮಹಾರಾಷ್ಟ್ರ ರಾಜ್ಯ ಕನ್ನಡಿಗರ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಮಾವೇಶವು 29-12-2007ರಂದು ಮುಂಬಯಿಯಲ್ಲಿ ಪ್ರಾರಂಭವಾಗಲಿದ್ದು ಪ್ರಾರಂಭೋತ್ಸವ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಇಲಾಖೆಯ ಜಂಟಿ ನಿರ್ದೇಶಕರಾದ ಕಾ.ತ. ಚಿಕ್ಕಣ್ಣ, ಅವರನ್ನು ಆಹ್ವಾನಿಸಿದ್ದು ಅದರೊಡನೆ ಸುವರ್ಣ ಸಾಂಸ್ಕೃತಿಕ ವೈಭವ ಕಾರ್ಯಕ್ರಮಕ್ಕೆ ಸಂಬಂಧಪಟ್ಟ ಸಂಘ ಸಂಸ್ಥೆಗಳೊಡನೆ ಚರ್ಚಿಸುವ ಕಾರ್ಯಕ್ರಮ ಇರುವ ಕಾರಣ ಕಾ.ತ. ಚಿಕ್ಕಣ್ಣ, ಜಂಟಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರಿಗೆ 29-12-2007ರಂದು ಮುಂಬಯಿಗೆ ಹಾಗೂ 31-12-2007ರಂದು ಮುಂಬಯಿನಿಂದ ಬೆಂಗಳೂರಿಗೆ ವಿಮಾನ ಪ್ರಯಾಣ ಮಾಡಲು ಸರ್ಕಾರದ ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 238 ಕಸನಿ 2007 ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಅಂಶಗಳಿಂದಾಗಿ ಕಾ.ತ. ಚಿಕ್ಕಣ್ಣ, ಜಂಟಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರಿಗೆ ದಿನಾಂಕ 29-12-2007 ಹಾಗೂ 31-12-2007 ರಂದು ಬೆಂಗಳೂರು-ಮುಂಬಯಿ ನಡುವೆ ವಿಮಾನ ಪ್ರಯಾಣ ಮಾಡಲು ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 50

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ವಿಷಯ:** ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಜಿಲ್ಲಾ ಘಟಕಗಳ ಕಾರ್ಯಕ್ರಮಗಳನ್ನು ಗಣಕೀಕರಣಗೊಳಿಸಲು ತಂತ್ರಾಂಶ ಸಿದ್ಧಪಡಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ: ಕಸಂವಾಪ್ರ 46 ಸ್ವೀಮರ 2007 ದಿ: 27-4-07
2. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರ ಪತ್ರ ಸಂ:ಕಸನಿ/11/ಸಇಮಾ/2007-08 ದಿ:21-9-07.

**ಪ್ರಸ್ತಾವನೆ:**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ 2007-08ನೇ ಸಾಲಿನ ಯೋಜನಾ ಕಾರ್ಯಕ್ರಮಗಳಿಗೆ ಮಂಜೂರಾತಿ ನೀಡಿ ಹೊರಡಿಸಲ್ಪಟ್ಟ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಾಹಿತಿ ಕೇಂದ್ರ, ಗ್ರಂಥಾಲಯಗಳ ಸಜ್ಜೀಕರಣ ಮತ್ತು ಅಭಿವೃದ್ಧಿಗಾಗಿ ರೂ.4 ಲಕ್ಷಗಳನ್ನು ನಿಗಧಿಪಡಿಸಲಾಗಿದೆ. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಮಾಹಿತಿ ಕೇಂದ್ರ ಸಜ್ಜೀಕರಣದನ್ವಯ ಜಿಲ್ಲೆಗಳಿಂದ ಕಾರ್ಯಕ್ರಮಗಳ ಆರ್ಥಿಕ-ಭೌತಿಕ ವರದಿಗಳನ್ನು ಪಡೆಯಲಾಗಿದ್ದು ಅವುಗಳನ್ನು ಗಣಕೀಕರಣಗೊಳಿಸುವ ಸಲುವಾಗಿ ತಂತ್ರಾಂಶವನ್ನು ಸಿದ್ಧಪಡಿಸಲು ಕರ್ನಾಟಕ ಗಣಕ ಪರಿಷತ್ತು ರೂ.50 ಸಾವಿರಗಳನ್ನು ಕೋರಿದ್ದು ಸದರಿ ಸಂಸ್ಥೆಗೆ ಹಣ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 220 ಕಸನಿ 2007, ಬೆಂಗಳೂರು ದಿನಾಂಕ: 3ನೇ ಜನವರಿ 2008**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಜಿಲ್ಲಾ ಘಟಕಗಳಿಂದ ಸಂಗ್ರಹಿಸಲಾದ ಆರ್ಥಿಕ - ಭೌತಿಕ ಪ್ರಗತಿಗಳ ಗಣಕೀಕರಣ ಸಂಬಂಧ ತಂತ್ರಾಂಶ ರೂಪಿಸುವ ಸಲುವಾಗಿ ಕರ್ನಾಟಕ ಗಣಕ ಪರಿಷತ್ತಿಗೆ ರೂ.50,000/-ಗಳನ್ನು ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 2007-08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205-00-102-4-01-015 (ಯೋಜನೆ) ರಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರೊಂದಿಗೆ ಸಮಾಲೋಚಿಸಿ ಇಲಾಖೆಗೆ ಪ್ರದತ್ತವಾದ ಆರ್ಥಿಕ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 113

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ವಿಷಯ:** ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಕಛೇರಿಗೆ ಸೃಜಿಸಲಾಗಿರುವ ಆಯುಕ್ತರ ಹುದ್ದೆಯನ್ನು ಮುಂದುವರೆಸುವ ಕುರಿತು.

**ಓದಲಾಗಿದೆ:**
1) ಆದೇಶ ಸಂಖ್ಯೆ: ಸಂಕಇ 12 ಕೆಎಂಯು 2004, ದಿ:25-3-2004.
2) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 9 ಕೆಎಂಯು 2006 ದಿ: 14-2-2006.
3) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 46 ಕೆಎಂಯು 2007 ದಿ: 26-3-2007
4) ಆಯುಕ್ತರು ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ರವರ ಪತ್ರ ಸಂಖ್ಯೆ: ಆಪ್ರಸಂಪಇ/ಇಎಸ್‌ಟಿ/ಆಹುಮು/2007-08 ದಿನಾಂಕ 29-11-2007

**ಪ್ರಸ್ತಾವನೆ:**

ಮೇಲೆ(1)ರಲ್ಲಿ ಓದಲಾದ ದಿನಾಂಕ: 25-03-2004ರ ಸರ್ಕಾರಿ ಆದೇಶದಲ್ಲಿ ಹೊಸದಾಗಿ ಅಸ್ತಿತ್ವಕ್ಕೆ ಬಂದಿರುವ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಕಛೇರಿಗೆ ಭಾರತೀಯ ಆಡಳಿತ ಸೇವೆಯ ಸೂಪರ್‌ಟೈಮ್ ವೇತನ ಶ್ರೇಣಿಯಲ್ಲಿ (ರೂ.18400-500-22400) ಆಯುಕ್ತರ ಹುದ್ದೆಯನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ. ಮೇಲೆ (3)ರಲ್ಲಿ ಓದಲಾದ ದಿನಾಂಕ: 26-3-2007ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಯನ್ನು ದಿನಾಂಕ:11.2.2007ರಿಂದ ಒಂದು ವರ್ಷದವರೆಗೆ ಮುಂದುವರೆಸಲಾಗಿತ್ತು. ಆಯುಕ್ತರು ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಅವರು ಮೇಲೆ (4)ರಲ್ಲಿ ಓದಲಾದ ದಿನಾಂಕ: 29-11-2007ರ ಪತ್ರದಲ್ಲಿ ಪರಂಪರಾ ಇಲಾಖೆಯ ಕಾರ್ಯವ್ಯಾಪ್ತಿಯು ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿದ್ದು, ಮೈಸೂರು ಶ್ರೀರಂಗಪಟ್ಟಣ, ಗುಲ್ಬರ್ಗ, ಕಿತ್ತೂರು, ಬಿಜಾಪುರ ಹಾಗೂ ಬೀದರ್ ನಗರಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ಕಾರ್ಯ ಪ್ರಗತಿಯಲ್ಲಿರುವುದರಿಂದ 2006-07ನೇ ಹಾಗೂ 2007-08ನೇ ಸಾಲಿನಲ್ಲಿ ಮಂಜೂರಾಗಿರುವ ಪರಂಪರಾ ಸಂರಕ್ಷಣಾ ಕಾರ್ಯಗಳನ್ನು ಅನುಷ್ಠಾನಗೊಳಿಸಲು ಕ್ರಮವಹಿಸಲಾಗುತ್ತಿದ್ದು, ಇದಕ್ಕಾಗಿ ಸಿದ್ದಪಡಿ ಸಿರುವ ಕ್ರಿಯಾ ಯೋಜನೆಗೆ ಸರ್ಕಾರವು ಅನುಮೋದನೆ ನೀಡಿರುವುದರಿಂದ

ಮತ್ತು ಪ್ರಸಕ್ತ ಸಾಲಿಗೆ ಸರ್ಕಾರವು ಪರಂಪರೆ ಇಲಾಖೆಗೆ ಬಿಡುಗಡೆ ಮಾಡಿರುವ ಅನುದಾನವನ್ನು ಉದ್ದೇಶಿತ ಕಾರ್ಯಗಳಿಗೆ ಉಪಯೋಗಿಸಿಕೊಳ್ಳುವ ಸಲುವಾಗಿ ಪರಂಪರೆ ಆಯುಕ್ತರ ಹುದ್ದೆಯನ್ನು ದಿನಾಂಕ: 11.2.2008ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಸರ್ಕಾರದ ಆದೇಶ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 284 ಕೆಎಂಯು 2007, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಂಕಇ 12 ಕೆಎಂಯು 2004, ದಿನಾಂಕ: 25.3.2004 ರಲ್ಲಿ ಸೃಜಿಸಲಾಗಿರುವ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರಾ ಇಲಾಖೆ ಈ ಹುದ್ದೆಯನ್ನು ತಾತ್ಕಾಲಿಕವಾಗಿ ದಿನಾಂಕ: 11.2.2008ರಿಂದ ಒಂದು ವರ್ಷದವರೆಗೆ ಅಥವಾ ಮುಂದಿನ ಆದೇಶದವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.7.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 268

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಶಾಂತಿಪ್ರಸಾದ್, ಪಿ.ಸಿ, 4035 ವಿಜಯನಗರ ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಪೂರ್ವ ವಿಭಾಗ, ಬೆಂಗಳೂರು ನಗರ,ಇವರ ಆದೇಶ ಸಂಖ್ಯೆ: 13/ಡಿಇ/ಅರ್–6/1997 ದಿನಾಂಕ: 11–11–2002
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು, ಇವರ ಹಿಂಬರಹ ಸಂಖ್ಯೆ: ಅಪೀಲು/34/2004 ದಿನಾಂಕ: 03–12–2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:13–02–2006.
4) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/34/2004 ದಿನಾಂಕ: 26–09–2006.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ PSC 173 CNS 2007 dated: 12–12–2007.

**ಪ್ರಸ್ತಾವನೆ:**

ಶ್ರೀ ಶಾಂತಿಪ್ರಸಾದ್, ಪಿ.ಸಿ, 4035 ವಿಜಯನಗರ ಪೊಲೀಸ್ ಠಾಣೆ, ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಆಪಾದಿತ ಪೊಲೀಸ್ ಅಧಿಕಾರಿ ಶ್ರೀ ಶಾಂತಿಪ್ರಸಾದ್, ಪಿ.ಸಿ, 4035, ಇಂದಿರಾನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದಾಗ, ದಿನಾಂಕ:12–03–1997ರಂದು ರಾತ್ರಿ ಸುಮಾರು 11 ಗಂಟೆಯಲ್ಲಿ ನವರಂಗ್ ಟಾಕೀಸ್ ಸಮೀಪ ಇರುವ ಸ್ವಾತಿ ಹೊಟೆಲ್ ಮುಂಭಾಗದ ರಸ್ತೆಯಲ್ಲಿ ನಿಮ್ಮ ಮಗ ಸುನೀಲ್ ಕುಮಾರ್, 3 1/2 ವರ್ಷದವನಿಗೆ ಚಿಕ್ಕ ಗಡಾರಿಯಿಂದ ತಲೆ, ಮುಖ ಮುಂತಾದ ಕಡೆ ಹೊಡೆದು ಕೊಲೆ ಮಾಡಿರುತ್ತೀರಿ. ಈ ಬಗ್ಗೆ ನಿಮ್ಮ ವಿರುದ್ಧ ಮಹಾಲಕ್ಷ್ಮಿ ಲೇಔಟ್ ಪೊಲೀಸ್ ಠಾಣೆಯಲ್ಲಿ ಮೊ.ಸಂ.78/97 ಕಲಂ 302 ಐ.ಪಿ.ಸಿ ಪ್ರಕಾರ ಕೇಸು ದಾಖಾಲಾಗಿರುತ್ತದೆ. ನೀವು ಶಿಸ್ತಿನ ಇಲಾಖೆಯಲ್ಲಿದ್ದು ಕಾನೂನು ಬಗ್ಗೆ ತಿಳುವಳಿಕೆ ಇದ್ದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿ ಕರ್ತವ್ಯದಲ್ಲಿ ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿದ್ದೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪಿ ಪೊಲೀಸ್ ಅಧಿಕಾರಿ ಮೇಲಿನ ಆರೋಪವನ್ನು ಬೆಂಬಲಿಸಿ ಯಾವುದೇ ಸಾಕ್ಷಿದಾರರು ಹೇಳಿಕೆ ನೀಡದೆ ಇರುವುದರಿಂದ ಆರೋಪಗಳು ಸಾಭೀತಾಗಿಲ್ಲವೆಂದು ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಪೂರ್ವ ವಿಭಾಗ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:11–11–2002ರ ಆದೇಶದಲ್ಲಿ ಅರ್ಜಿದಾರರ ಅಮಾನತ್ತಿನಲ್ಲಿ ಕಳೆದ ಅವಧಿ ದಿ05–06–1997 ರಿಂದ 07–01–2002 ರವರೆಗಿನ ಅವಧಿಯನ್ನು ಲೆಕ್ಕದಲ್ಲಿರುವ ರಜೆ ಎಂದು ಪರಿಗಣಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ಇವರು ವಿಳಂಬವಾಗಿ ಸಲ್ಲಿಸಿರುವ ಮೇಲ್ಮನವಿ ಅರ್ಜಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 03-12-2005 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ ಶಾಂತಿಪ್ರಸಾದ್, ಪಿ.ಸಿ.4035, ವಿಜಯನಗರ ಪೊಲೀಸ್ ಠಾಣೆ ಇವರು ದಿನಾಂಕ:12-03-1997 ರಂದು ಅವರ ಮಗ ಸುನಿಲ್‌ಕುಮಾರ್‌ನನ್ನು ಚಿಕ್ಕ ಗಡಾರಿಯಿಂದ ಹೊಡೆದು ಕೊಲೆ ಮಾಡಿರುತ್ತಾರೆಂದು ಅಪಾದಿಸಿ ಅವರ ವಿರುದ್ಧ ಮಹಾಲಕ್ಷ್ಮಿ ಲೇಔಟ್ ಪೊಲೀಸ್ ಠಾಣೆಯಲ್ಲಿ ಮೊ.ಸಂ.78/97 ಕೇಸು ದಾಖಲಾಗಿರುತ್ತದೆ. ಆರೋಪದ ಸಂಬಂಧ ಇಲಾಖಾ ವಿಚಾರಣೆ ನಡೆದಾಗ ಆರೋಪವು ಸಾಬೀತಾಗಿಲ್ಲವೆಂದು ವರದಿ ಮಾಡಿರುತ್ತಾರೆ. ಶಿಸ್ತು ಪ್ರಾಧಿಕಾರಿಯವರು ವಿಚಾರಣಾ ವರದಿಯನ್ನು ಒಪ್ಪಿ ಅರ್ಜಿದಾರರನ್ನು ದೋಷಮುಕ್ತಗೊಳಿಸಿ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅವರ ಲೆಕ್ಕದಲ್ಲಿರುವ ರಜೆಯೆಂದು ಪರಿಗಣಿಸಿ ದಿನಾಂಕ: 11-11-2002ರಂದು ಆದೇಶ ಹೊರಡಿಸಿರುತ್ತಾರೆ. ಅರ್ಜಿದಾರರ ವಿರುದ್ಧ ಹೊರಿಸಲಾದ ಆರೋಪ ಸಾಬೀತಾಗಿಲ್ಲವಾದ್ದರಿಂದ ಹಾಗೂ ಅವರನ್ನು ದೋಷಮುಕ್ತರನ್ನಾಗಿ ಮಾಡಿರುವುದರಿಂದ ಅವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ತವ್ಯದ ಮೇಲಿನ ಅವಧಿಯೆಂದು ಪರಿಗಣಿಸಲು ಸರ್ಕಾರ ನಿರ್ಧರಿಸಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 148 ಪೊಸಿಅ 2007, ಬೆಂಗಳೂರು ದಿ:14ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಾಂತಿಪ್ರಸಾದ್, ಪಿ.ಸಿ, 4035 ವಿಜಯನಗರ ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನೆಯಾದ ಅಮಾನತ್ತಿನಲ್ಲಿ ಕಳೆದ ಅವಧಿ ದಿನಾಂಕ: 05-06-1997 ರಿಂದ 07-01-2002 ರವರೆಗಿನ ಅವಧಿಯನ್ನು ಲೆಕ್ಕದಲ್ಲಿರುವ ರಜೆ ಎಂದು ಪರಿಗಣಿಸಿರುವ ದಂಡನೆಯನ್ನು ರದ್ದುಗೊಳಿಸಿ, ಕರ್ತವ್ಯದ ಮೇಲಿನ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 173 ಸಿಎನ್‌ಎಸ್ 2007 ದಿನಾಂಕ:12-12-2007 ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 162

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀಮತಿ ಎಂ.ಎ. ಅಮೃತಬಾಯಿ, ಮಾಜಿ ಮಸಿಪಿ-734, ಶಿವಮೊಗ್ಗ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್, ಶಿವಮೊಗ್ಗ ಜಿಲ್ಲೆ ಇವರ ಆದೇಶ ಸಂಖ್ಯೆ: ಡಿಇ/10/2003 ದಿನಾಂಕ: 09-07-2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಹಿಂಬರಹ ಸಂಖ್ಯೆ: ಅಪೀಲು/11/2004-05 ದಿನಾಂಕ: 07-09-2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:12-09-2007.
4) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)81/2007-08 ದಿನಾಂಕ: 05-10-2007.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ PSC 181 CNS 2007 dated: 14-12-2007.

**ಪ್ರಸ್ತಾವನೆ:**

ಶ್ರೀಮತಿ ಎಂ.ಎ. ಅಮೃತಬಾಯಿ, ಮಾಜಿ ಮಸಿಪಿ-734, ಶಿವಮೊಗ್ಗ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1) ಆರೋಪಿತ ಪೊಲೀಸ್ ಅಧಿಕಾರಿ ಶ್ರೀಮತಿ ಎಂ.ಎ. ಅಮೃತಬಾಯಿ, ಮಾಜಿ ಮಪಿಸಿ734, ಮಹಿಳಾ ಪೊಲೀಸ್ ಠಾಣೆ, ಶಿವಮೊಗ್ಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದಾಗ, ದಿನಾಂಕ:25.01.2003 ರಂದು ರಾತ್ರಿ 8-30 ಗಂಟೆ ಸಮಯದಲ್ಲಿ ಶಿವಮೊಗ್ಗ ಮಹಿಳಾ ಪೊಲೀಸ್ ಠಾಣೆಯಲ್ಲಿ ಶ್ರೀಮತಿ ಕಮಲಮ್ಮ, ಎ.ಎಸ್.ಐ ಹಾಗೂ ಹಗಲು ಪ್ರಭಾರದ ಶ್ರೀಮತಿ ಸುಜಾತ, ಮ.ಹೆಚ್.ಸಿ-434, ಶ್ರೀಮತಿ ಪಾರ್ವತಿಬಾಯಿ, ಮ.ಹೆಚ್.ಸಿ-438, ಶ್ರೀಮತಿ ಸುಜಾತ, ಮ.ಹೆಚ್.ಸಿ-434 ರವರನ್ನು ಉದ್ದೇಶಿಸಿ ನೀವು ಮ.ಹೆಚ್.ಸಿ-432, ಪುಷ್ಪ, ಮ.ಹೆಚ್.ಸಿ-439, ಗೀತಾಮೊಗರ್ತಿ ಹಾಗು ಗೀತಾಂಜಲಿ, ಗ್ಲೋರಿ, ನಿರ್ಮಲ,ಲಲಿತ ಇವರೊಂದಿಗೆ ಸೇರಿಕೊಂಡು ದಿನಾಂಕ:22-01-2003 ರಂದು ಎಚ್ಚರಿಕೆ ಪೇಪರಿನಲ್ಲಿ ಮಹಿಳಾ ಠಾಣೆಯ ಬಗ್ಗೆ ಬಂದ ಸುದ್ದಿಯನ್ನು ನಾನೇ ಪೇಪರಿನಲ್ಲಿ ಹಾಕಿಸಿದ್ದೇನೆ ಎಂದು ಅಫೀಸರ್ ಹತ್ತಿರ ಹೋಗಿ ಚಾಡಿ ಹೇಳಿದ್ದೀರೆಂದು ಜೋರಾಗಿ ಕೂಗಾಡಿದ್ದು, ಶಿಸ್ತಿನ ಇಲಾಖೆಯಲ್ಲಿದ್ದು, ಸಹದ್ಯೋಗಿಗಳೊಂದಿಗೆ ಅಸಭ್ಯವಾಗಿ ವರ್ತಿಸಿ;

2) ಕು:ಎಂ.ಎ. ಅಮೃತಬಾಯಿ, ಮ.ಪಿ.ಸಿ-734 ಆದ ನೀವುಗಳು ದಿನಾಂಕ:25-01-03 ರಂದು ರಾತ್ರಿ 8-30 ಗಂಟೆ ಸಮಯದಲ್ಲಿ ಶಿವಮೊಗ್ಗ ಮಹಿಳಾ ಪೊಲೀಸ್ ಠಾಣೆಯಲ್ಲಿ ಪುಷ್ಪಾ, ಮ.ಹೆಚ್.ಸಿ-432 ರವರಿಗೆ ಏ ಪುಷ್ಪಾ ನೀವು ಸಹ ನಾನೇ ಪೇಪರ್‌ನಲ್ಲಿ ಹಾಕಿಸಿದ್ದೇನೆ ಎಂದು ಆಫೀಸರ್ ಹತ್ತಿರ ಹೋಗಿ ಹೇಳಿದ್ದೀರಾ, ನಿಮ್ಮಗಳನ್ನು ಸುಮ್ಮನೆ ಬಿಡುವುದಿಲ್ಲ. ಸುಭಾಷ್‌ಭರಣಿ ಯವರ ಹತ್ತಿರ ಹೋಗಿ ಮಾತನಾಡುತ್ತೇನೆ ಎಂದು ಜೋರಾಗಿ ಕೂಗಾಡಿದ್ದು, ವರಿಷ್ಠ ಆಧಿಕಾರಿ ಯವರನ್ನು ನಿಮ್ಮ ವೈಯಕ್ತಿಕ ವಿಚಾರದಲ್ಲಿ ಪ್ರಸ್ತಾಪಿಸಿ ಇಲಾಖೆಯ ಗೌರವಕ್ಕೆ ಧಕ್ಕೆ ಬರುವಂತೆ ಅಸಭ್ಯವಾಗಿ ವರ್ತಿಸಿ,

3) ಕು:ಎಂ.ಎ. ಅಮೃತಬಾಯಿ, ಮಪಿಸಿ-734 ಆದ ನೀವು ದಿನಾಂಕ: 25-01-2003 ರಂದು ರಾತ್ರಿ 8-30 ಗಂಟೆ ಸಮಯದಲ್ಲಿ ಶಿವಮೊಗ್ಗ ಮಹಿಳಾ ಪೊಲೀಸ್ ಠಾಣೆಯಲ್ಲಿ ನಿಮ್ಮ ತಾಯಿ ಶ್ರೀ ರತ್ನಾಬಾಯಿ ಇವರೊಂದಿಗೆ ಬಂದು ಮತ್ತು ನಿಮ್ಮ ತಾಯಿಯವರು ನನ್ನ ಮಗಳೇನು ಎಲ್ಲಾ ಮ.ಪಿ.ಸಿ.ಯವರಂತೆ ರಾತ್ರಿ ಡ್ಯೂಟಿ ಮಾಡಿ ಗರ್ಬಿಣೆಯಾಗಿ ಮಕ್ಕಳನ್ನು ಹಡೆದುಕೊಳ್ಳಲಿಲ್ಲ. ನಾವು ವಿಧಾನಸೌಧಕ್ಕೆ ಹೋಗುತ್ತೇನೆ. ಮಹಿಳಾ ಠಾಣೆಯನ್ನು ಮುಚ್ಚಿಸುತ್ತೇವೆ ಎಂದು ಇತ್ಯಾದಿ, ಕೆಟ್ಟ ಶಬ್ಧಗಳಿಂದ ನಿಂದಿಸುತ್ತಾ ಕರ್ತವ್ಯ ನಿರ್ವಹಿಸುತ್ತಿದ್ದ ಸಿಬ್ಬಂದಿಯವರಿಗೆ ಅಡಚಣೆವುಂಟು ಮಾಡಿ ಮತ್ತು ಮಹಿಳಾ ಸಿಬ್ಬಂದಿಯವರಿಗೆ ಮನಸ್ಸಿಗೆ ಆಘಾತವನ್ನುಂಟು ಮಾಡಲು ಠಾಣೆಯ ಬಳಿ ಕರೆತಂದು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್, ಶಿವಮೊಗ್ಗ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:09-07-2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುವುದಾಗಿ ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 07-09-2004 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಂಥಹ ಘಟನೆಗಳು ಕಛೇರಿಯಲ್ಲಿ ಸರ್ವೆ ಸಾಮಾನ್ಯವಾಗಿ ನಡೆಯುತ್ತಿರುವುದು ಸಹಜವಾಗಿರುತ್ತದೆ. ಇಂಥಹ ಘಟನೆಗಳು ಕಛೇರಿಯಲ್ಲಿ ನಡೆದಾಗ ಮೇಲಾಧಿಕಾರಿಗಳು ತನ್ನ ಅಧೀನ ಸಿಬ್ಬಂದಿಗಳಿಗೆ ಇಂಥಹ ಘಟನೆಗಳು ಕಛೇರಿಗಳಲ್ಲಿ ನಡೆಯದಂತೆ ಸಿಬ್ಬಂದಿಯವರಿಗೆ ಎಚ್ಚರಿಕೆ ನೀಡಬಹುದಾಗಿತ್ತು. ಈ ಘಟನೆಗೆ ಸಂಬಂಧಿಸಿದಂತೆ ಆರೋಪಿತರಿಗೆ ಸೇವೆಯಿಂದ ವಜಾ ಮಾಡಿದ ಶಿಕ್ಷೆಯು ತೀವ್ರತರವಾದ ಶಿಕ್ಷೆ ಆಗಿರುತ್ತದೆ.

ಇನ್ನು ಮುಂದೆ ಈ ರೀತಿ ಘಟನೆಗಳಿಗೆ ಆಸ್ಪದವಾಗದಂತೆ ಶಿಸ್ತು ಪ್ರಾಧಿಕಾರವು ದಿನಾಂಕ:09-07-04ರಲ್ಲಿ ನೀಡಿರುವ ದಂಡನಾದೇಶವನ್ನು ರದ್ದುಪಡಿಸಿ, ಎಚ್ಚರಿಕೆ ನೀಡಿ ಸೇವೆಗೆ ಪುನರ್ ನೇಮಕ ಮಾಡವಂತೆ ಪರಿಗಣಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಅನಮೋದನೆಗಾಗಿ ಕೋರಲಾಗಿದ್ದು, ಆಯೋಗವು ದಿನಾಂಕ:14-12-2007ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸ'ಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 248 ಪೊಸಿಅ 2007,ಬೆಂಗಳೂರು ದಿ:17ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಎಂ.ಎ.ಅಮೃತಬಾಯಿ, ಮಾಜಿ ಮ.ಪಿ.ಸಿ-734 ಇವರನ್ನು ಸೇವೆಯಿಂದ ವಜಾಗೊಳಿಸಿ ಶಿಸ್ತು ಪ್ರಾಧಿಕಾರದ ದಿನಾಂಕ: 09-07-2004 ಆದೇಶದ ಸಂಖ್ಯೆ: ಡಿಇ/10/2003 ಅನ್ನು ರದ್ದು ಪಡಿಸಿ ಎಚ್ಚರಿಕೆ ನೀಡಿ ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಲು ಆದೇಶಿಸಿದೆ. ಅರ್ಜಿದಾರರು ಸೇವೆಯಿಂದ ವಜಾಗೊಂಡ ದಿನಾಂಕದಿಂದ ಸೇವೆಗೆ ಮರು ನೇಮಕಾತಿ ಹೊಂದಿ ಕರ್ತವ್ಯಕ್ಕೆ ಹಾಜರಾಗುವ ದಿನಾಂಕದ ಅವಧಿಯನ್ನು ಕೆ.ಸಿ.ಎಸ್.ಆರ್ ನಿಯಮ 8(14-a) ರನ್ವಯ ಸೇವೆಯಿಂದ ಹೊರಗುಳಿದ ಅವಧಿ(Dies-non) ಎಂದು ಪರಿಗಣಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 181 ಸಿಎನ್‌ಎಸ್ 2007 ದಿನಾಂಕ: 14–12–2007 ರನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.154

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಆರ್.ಬಿ. ಹಿಟ್ನಳ್ಳಿ, ಪಿ.ಸಿ.–1057, ಬಾಗಲಕೋಟೆ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ:3:ಡಿಇ:4:2004 ದಿನಾಂಕ: 19–11–2004
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾಂ ಇವರ ಆದೇಶ ಸಂಖ್ಯೆ:ಅಪೀಲು 41:ಉ.ವ.:2004 ದಿನಾಂಕ: 06–09–2005
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 27–11–2006
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು:(2):132:2006 ದಿನಾಂಕ: 12–04–2007
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC 180: CNS 2007 ದಿನಾಂಕ: 02–04–2008

**ಪ್ರಸ್ತಾವನೆ:**

ಶ್ರೀ ಆರ್.ಬಿ. ಹಿಟ್ನಳ್ಳಿ, ಪಿ.ಸಿ.–1057, ಬಾಗಲಕೋಟೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ಆರ್.ಬಿ. ಹಿಟ್ನಳ್ಳಿ, ಪಿ.ಸಿ.1057, ಬಿಜಾಪೂರ ಜಿಲ್ಲೆ ಇವರು ಬನಹಟ್ಟಿ ಪೊಲೀಸ್ ಠಾಣೆ ಇಲ್ಲಿ ಪಿ.ಸಿ. ಸಂಖ್ಯೆ: 1067 ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 20–9–2003 ರವರೆಗೆ ಅನಧೀಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ ಇವರಿಂದ ಪಲಾಯನ ಪತ್ರ ಹೊರಡಿಸಿ ಅದು ಇವರ ಮೇಲೆ ದಿನಾಂಕ: 23–10–2003 ರಂದು ಜಾರಿಯಾಗಿದ್ದರೂ ಕೂಡ 7 ದಿವಸದೊಳಗಾಗಿ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ ಇವರಿಗೆ ಭೇಟಿಯಾಗಿ ಗೈರುಹಾಜರಾಗಿರುವುದಕ್ಕೆ ಕಾರಣ ಸಲ್ಲಿಸಿರುವುದಿಲ್ಲ. ಅದೂ ಅಲ್ಲದೇ ಇವರು ಪದೇ ಪದೇ ಅನಧೀಕೃತವಾಗಿ ಗೈರುಹಾಜರಾಗಿ ಉಳಿಯುವ ಸ್ವಭಾವದವರಾಗಿದ್ದು, ಕರ್ತವ್ಯದಲ್ಲಿ ಘೋರ ದುರ್ನಡತೆ, ಅಶಿಸ್ತು, ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:19–11–2004ರ ಆದೇಶದಲ್ಲಿ ಅರ್ಜಿದಾರರನ್ನು ತಕ್ಷಣದಿಂದ ಜಾರಿಗೆ ಬರುವಂತೆ ತಕ್ಷಣದಿಂದ ವಜಾ ಮಾಡುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾಂ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿ ಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:06–09–2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಂಥಹದೇ ಪ್ರಕರಣವೊಂದರಲ್ಲಿ (ಸಂಬಂಧಪಟ್ಟ ಕಡತ ಸಂಖ್ಯೆ: ಒ.ಇ/208/ಪೊಸಿಅ/2005 ನ್ನು ಈ ಕಡತದ ಕೆಳಗೆ ಇಡಲಾಗಿದೆ) ಶ್ರೀ ಐ.ಬಿ. ಹಳ್ಳೂರ, ಪಿಸಿ–1021, ಬಾಗಲಕೋಟೆ ಜಿಲ್ಲೆ ಇವರು 15–10–2003 ರಿಂದ 9–12–2003 ರವರೆಗೆ ಅನಧೀಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾದ ಸಂಬಂಧ ಶಿಸ್ತು ಪ್ರಾಧಿಕಾರವು ಇವರನ್ನು ಸೇವೆಯಿಂದಲೇ ವಜಾಗೊಳಿಸಿದ ಆದೇಶದ ವಿರುದ್ದ ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಸಲ್ಲಿಸಲಾಗಿ ಅವರ ಪರಿಷ್ಕರಣಾ ಮೇಲ್ಮನವಿಯನ್ನು ಪರಿಷ್ಕರಿಸಿ ಸರ್ಕಾರದ ಆದೇಶ ಸಂಖ್ಯೆ: ಒ.ಇ/208/ಪೊಸಿಅ/2005, ದಿನಾಂಕ: 3–5–2006 ರಲ್ಲಿ ಶ್ರೀ ಐ.ಬಿ. ಹಳ್ಳೂರ ಇವರನ್ನು ಸೇವೆಗೆ

ಪುನರ್ ಸ್ಥಾಪಿಸಿ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ/18/ಸೇಇವಿ/2001, ದಿನಾಂಕ: 14–9–2001 ರನ್ವಯ ಅರ್ಜಿದಾರರ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿದು 3 ವರ್ಷಗಳ ನಂತರ ದಂಡನಾದೇಶದ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನ ಹಂತದಿಂದ ವಾರ್ಷಿಕ ವೇತನ ಬಡ್ತಿ ಪಡೆಯತಕ್ಕದ್ದು ಎಂದು ಹೊರಗುಳಿದ ಅವಧಿಯನ್ನು ವೈದ್ಯಕೀಯ ರಜೆಯೆಂದು ಪರಿಗಣಿಸಲು ಆದೇಶಿಸಿದೆ.

ಇವೆರೆಡು ಒಂದೇ ತರಹದ ಪ್ರಕರಣಗಳಾಗಿರುವುದರಿಂದ ಶಿಸ್ತು ಪ್ರಾಧಿಕಾರ ವಿಧಿಸಿರುವ ಸೇವೆಯಿಂದ ವಜಾಗೊಳಿಸುವ ದಂಡನೆ ಅತೀ ತೀವ್ರತರವಾಗಿರುವುದರಿಂದ ಸದರಿ ಅರ್ಜಿದಾರರ ಕುಟುಂಬದ ಪರಿಸ್ಥಿತಿಯನ್ನು ಆಧಾರವಾಗಿ ಪರಿಗಣಿಸಿ ಮಾನವೀಯತೆಯ ದೃಷ್ಟಿಯಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 161 ಪೊಸಿಅ 2007 ಬೆಂಗಳೂರು, ದಿನಾಂಕ: 12ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ಬಿ. ಹಿಟ್ನಳ್ಳಿ, ಪಿ.ಸಿ.–1057, ಬಾಗಲಕೋಟೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1) ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡುವುದು. ಹಾಗೂ
2) ಇವರ 3 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿದು ಮೂರು ವರ್ಷಗಳ ನಂತರ ದಂಡನಾದೇಶದ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನ ಹಂತದಿಂದ ವಾರ್ಷಿಕ ವೇತನ ಬಡ್ತಿ ಪಡೆಯತಕ್ಕದ್ದು.
3) ದಿ: 20–09–2003 ರಿಂದ 20–11–2003ರ ವರೆಗಿನ ಅವಧಿಯನ್ನು ವೈದ್ಯಕೀಯ ರಜೆಯೆಂದು ಪರಿಗಣಿಸುವುದು ಮತ್ತು ಶಿಸ್ತು ಪ್ರಾಧಿಕಾರಿಯು ಸೇವೆಯಿಂದ ವಜಾಮಾಡಿದ ಅವಧಿಯಿಂದ ಸೇವೆಗೆ ಪುನರ್ ಸ್ಥಾಪಿಸುವ/ಹಾಜರಾಗುವವರೆಗಿನ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸುವುದು.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 180 ಸಿಎನ್‌ಎಸ್ 2007 ದಿ:02–04–2008 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.840

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2007-08ನೇ ಸಾಲಿಗೆ ಎರಡನೇ ಕಂತಿನ ಅನುದಾನವನ್ನು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ. ಗ್ರಾಅಪ. 11. ಪಘಯೋ. 2007 ದಿನಾಂಕ. 23.04.2007.
2. ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ಇವರ ಪತ್ರ ಸಂ. ಪಿಸಿ (ಪಿ) 19/ 312/ ಎಸ್‌ಸಿಎ/ 2007-ಡಬ್ಲ್ಯೂಜಿಎಸ್ ದಿನಾಂಕ. 29.11.07.
3. ಹಣಕಾಸು ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ಇವರ ಆದೇಶ ಸಂ.ಎಫ್.ನಂ.44(6)ಪಿಎಫ್I/2006-233 ದಿನಾಂಕ. 10.1.2008.
4. ಆರ್ಥಿಕ ಇಲಾಖೆಯ ಜಮಾ ಧೃಡೀಕರಣ ಪತ್ರ ಸಂ.ಆಇ.71. ಎಫ್‌ಆರ್‌ಸಿ. 2007 ದಿನಾಂಕ. 22.1.08.

**ಪ್ರಸ್ತಾವನೆ:**

ಭಾರತ ಸರ್ಕಾರದ ಯೋಜನಾ ಆಯೋಗದ ಪಶ್ಚಿಮ ಘಟ್ಟಗಳ ಸಚಿವಾಲಯವು ಮೇಲೆ ಓದಲಾದ ಪತ್ರ (2)ರಲ್ಲಿ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅನುಷ್ಠಾನಕ್ಕಾಗಿ 2007-08ನೇ ಸಾಲಿನ ಒಟ್ಟಾರೆ ಅನುದಾನ ರೂ.2418.00 ಲಕ್ಷ ಪೈಕಿ ಶೇ.25ರಷ್ಟು ಅಂದರೆ ರೂ.604.50 ಲಕ್ಷ ಆಗಲಿದ್ದು, ಅದರಲ್ಲಿ ವಿಶೇಷ ಕೇಂದ್ರ ಅನುದಾನದ ನಿಧಿ ಭಾಗದ ಮೊತ್ತವಾದ ರೂ.544.05 ಲಕ್ಷಗಳನ್ನು ಎರಡನೇ ಕಂತಿನ ಅನುದಾನವಾಗಿ ರಾಜ್ಯಕ್ಕೆ ಬಿಡುಗಡೆ ಮಾಡಲು ಪ್ರಸ್ತಾಪಿಸಿದ್ದು, ಭಾರತ ಸರ್ಕಾರದ ಹಣಕಾಸು ಮಂತ್ರಾಲಯವು ಮೇಲೆ ಓದಲಾದ ಪತ್ರ(3)ರಂತೆ ಸದರಿ ಅನುದಾನವನ್ನು ರಾಜ್ಯಕ್ಕೆ ಬಿಡುಗಡೆ ಮಾಡಿರುತ್ತದೆ. ಈ ಅನುದಾನವನ್ನು ರಾಜ್ಯದ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿರುತ್ತದೆ.

ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂ.ಗ್ರಾಅಪ.17.ಪಘಯೋ.2007(ಭಾ-1)ಬೆಂಗಳೂರು, ದಿನಾಂಕ.20ನೇ ಫೆಬ್ರವರಿ 2008**

ಕೇಂದ್ರ ಪುರಸ್ಕೃತ ಕಾರ್ಯಕ್ರಮವಾದ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮವನ್ನು 2007-08ನೇ ಸಾಲಿನಲ್ಲಿ ಅನುಮೋದಿತ ಕ್ರಿಯಾ ಯೋಜನೆಯ ಅನ್ವಯ ಅನುಷ್ಠಾನಗೊಳಿಸುವ ಸಲುವಾಗಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಎರಡನೇ ಕಂತಿನ ವಿಶೇಷ ಕೇಂದ್ರ ಅನುದಾನ ರೂ.544.05 ಲಕ್ಷ ಪೈಕಿ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಯೋಜನಾ ಕೋಶಕ್ಕೆ ರೂ.4.95 ಲಕ್ಷ ಅನುದಾನ ಹೊಂದಾಣಿಕೆ ಮಾಡಿಕೊಂಡು ಬಾಕಿ ಉಳಿದ ಅನುದಾನ ರೂ.539.10 ಲಕ್ಷ (ರೂ.ಐದು ಕೋಟಿ ಮೂವತ್ತೊಂಭತ್ತು ಲಕ್ಷದ ಹತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ರಾಜ್ಯದ 11 ಜಿಲ್ಲಾ ಪಂಚಾಯತಿಗಳಿಗೆ ಅನುಬಂಧ-1 ರಲ್ಲಿ ತೋರಿಸಿರುವಂತೆ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

1. 2007-08ನೇ ಸಾಲಿನಲ್ಲಿ ನಿಮ್ಮ ಜಿಲ್ಲೆಯ ಕ್ರಿಯಾ ಯೋಜನೆಯಲ್ಲಿ ನಮೂದಿಸಿರುವ ಕಾರ್ಯಕ್ರಮಗಳನ್ನು ಮಾತ್ರ ನಿಮ್ಮ ಜಿಲ್ಲೆಗೆ ನಿಗದಿಪಡಿಸಿರುವ ಅನುದಾನಕ್ಕೊಳಪಟ್ಟು ಅನುಷ್ಠಾನಗೊಳಿಸುವುದು.
2. ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮವನ್ನು ಕೇಂದ್ರ ಸರ್ಕಾರವು ಕಾಲಕಾಲಕ್ಕೆ ಹೊರಡಿಸುತ್ತಿರುವ ಮಾರ್ಗಸೂಚಿಗಳನ್ವಯ ಅನುಷ್ಠಾನಗೊಳಿಸುವುದು.
3. ಒಂದು ವಲಯಕ್ಕೆ ನಿಗದಿಪಡಿಸಿರುವ ಅನುದಾನವನ್ನು ಇನ್ನೊಂದು ವಲಯಕ್ಕೆ ಯಾವುದೇ ಕಾರಣಕ್ಕೂ ವರ್ಗಾಯಿಸಬಾರದು
4. ಹಾಲಿ ಬಿಡುಗಡೆ ಮಾಡಿರುವ ಅನುದಾನದಲ್ಲಿ ಅನುಮೋದಿತ ಕ್ರಿಯಾ ಯೋಜನೆಯಲ್ಲಿನ ಮುಂದುವರೆದ ಅಪೂರ್ಣ ಕಾಮಗಾರಿಗಳಿಗೆ ಪ್ರಥಮ ಅದ್ಯತೆ ನೀಡಿ ಪೂರ್ಣ ಗೊಳಿಸತಕ್ಕದ್ದು. ಆನಂತರ ತೋಟಗಾರಿಕೆ ಹಾಗೂ ಅರಣ್ಯೀಕರಣ ಕಾಮಗಾರಿಗಳಿಗೆ ಆದ್ಯತೆ ನೀಡಿ ಅನುಮೋದನೆಯಾಗಿರುವ ಹೊಸ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಅನುಷ್ಠಾನಗೊಳಿಸುವುದು.
5. ಸಾಂಬಾರು ಮಂಡಳಿಯ ಕಾರ್ಯಕ್ರಮಗಳಿಗೆ ಪ್ರಸ್ತುತ ಕಂತಿನಲ್ಲಿ ಒದಗಿಸಿರುವ ಅನುದಾನ ರೂ.5.00 ಲಕ್ಷಗಳನ್ನು ಆ ಮಂಡಳಿಗೆ ಸಂಬಂಧಪಟ್ಟ ಜಿಲ್ಲಾ ಪಂಚಾಯತ್‌ಗಳು ಬಿಡುಗಡೆ ಮಾಡುವುದು.
6. ಜಾನುವಾರುಗಳ ನಿಗೂಢ ಕಾಯಿಲೆ ಯೋಜನೆಗೆ ಪ್ರಸ್ತುತ ಕಂತಿನಲ್ಲಿ ಒದಗಿಸಿರುವ ಅನುದಾನ ರೂ.7.50 ಲಕ್ಷಗಳನ್ನು ಕಂಪ್ಟ್ರೋಲರ್ (ಹಣಕಾಸು ನಿಯಂತ್ರಕರು), ಕರ್ನಾಟಕ ಪಶು ವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಇವರಿಗೆ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳು ಬಿಡುಗಡೆ ಮಾಡುವುದು.
7. 2006-07ನೇ ಸಾಲಿನಲ್ಲಿ ಬಿಡುಗಡೆ ಮಾಡಿದ ಅನುದಾನದಲ್ಲಿ ದಿನಾಂಕ.31.03.2007ಕ್ಕೆ ಖರ್ಚಾಗದೇ ಉಳಿದಿರುವ ಅನುದಾನವನ್ನು, 2007-08ನೇ ಸಾಲಿಗೆ ನಿಮ್ಮ ಜಿಲ್ಲೆಯ ಅನುಮೋದಿತ ಆಯವ್ಯಯದಲ್ಲಿನ ಎರಡನೇ ಕಂತಿನ ಅನುದಾನದಲ್ಲಿ ಅನುಬಂಧ-1ರಲ್ಲಿ ತೋರಿಸಿರುವಂತೆ ವಸೂಲಾತಿ ಮಾಡಿಕೊಳ್ಳಲಾಗಿದೆ.
8. ಕೇಂದ್ರ ಸರ್ಕಾರವು ನಿಗದಿಪಡಿಸಿರುವ ನಮೂನೆಯಲ್ಲೇ ಪ್ರತಿ ತ್ರೈಮಾಸಿಕ ವರದಿಯನ್ನು ಸಕಾಲದಲ್ಲಿ ತಪ್ಪದೇ ಸರ್ಕಾರಕ್ಕೆ ಸಲ್ಲಿಸುವುದು.
9. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ.7. ಜೆಡ್‌ಪಿಎ.2003 ದಿನಾಂಕ.14.7.2005ರ ಸೂಚನೆಗಳ ಪ್ರಕಾರ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಖಜಾನೆಯಿಂದ ಪಡೆಯುವುದು. ``2551-ಗುಡ್ಡಗಾಡು ಪ್ರದೇಶಗಳು-01-ಪಶ್ಚಿಮ ಘಟ್ಟಗಳು-198-ಗ್ರಾಮ ಪಂಚಾಯತಿಗಳಿಗೆ ಸಹಾಯ-6-ಗ್ರಾಮ ಪಂಚಾಯತ್-ಕೇಂದ್ರ ಪುರಸ್ಕೃತ ಯೋಜನೆ-02-ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮ (ಯೋಜನೆ)``

ಈ ಆದೇಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ. ಗ್ರಾಅಪ. 81.ಪಿಬಿಎಸ್.2008ರ ದಿನಾಂಕ.19.2.2008ರಲ್ಲಿ ಸಹಮತಿಸಿದಂತೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಂ. ಶಿರೋಳ್**

ನಿರ್ದೇಶಕರು

ಯೋಜನೆ ಸಮನ್ವಯ ಹಾಗೂ ಮೌಲ್ಯಮಾಪನ ಘಟಕ

ಹಾಗೂ ಪದ ನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಅನುಬಂಧ-1
ಸರ್ಕಾರದ ಆದೇಶದ ಸಂ.ಗ್ರಾಅಪ.17.ಪಘಯೋ.2007 (ಭಾಗ-1) ಬೆಂಗಳೂರು, ದಿನಾಂಕ. 20.02.2008
2007-08ನೇ ಸಾಲಿನ ಜಿಲ್ಲಾವಾರು ಎರಡನೇ ಕಂತಿನ ಅನುದಾನ ಬಿಡುಗಡೆ ತ:ಖ್ತೆ

(ರೂ.ಲಕ್ಷಗಳಲ್ಲಿ)

| ಕ್ರ. ಸಂ. | ಜಿಲ್ಲೆಯ ಹೆಸರು | ಜಿಲ್ಲೆಯ ಕೋಡ್ | 2007-08ನೇ ಸಾಲಿನ ಜಿಲ್ಲಾವಾರು ಅನುದಾನ ಹಂಚಿಕೆ | ಪರಿಷ್ಕೃತ ರಾಜ್ಯ ಆಯವ್ಯಯ ದಂತೆ ಅನುದಾನ ಹಂಚಿಕೆ | ಜಿಲ್ಲೆಗಳಿಗೆ ಬಿಡುಗಡೆ ಮಾಡಬೇಕಾಗಿದ್ದ ಎರಡನೇ ಕಂತಿನ ಅನುದಾನ (ವಿಶೇಷ ಕೇಂದ್ರ ಅನುದಾನ) | 2006-07ನೇ ಸಾಲಿನ ಅಂತಿಮ ಶಿಲ್ಕು (2006-07ನೇ ಸಾಲಿನಲ್ಲಿ ಖರ್ಚಾಗದೇ ಉಳಿದಿರುವ ಅನುದಾನ) | 2006-07ನೇ ಸಾಲಿನಲ್ಲಿ ಖರ್ಚಾಗದೇ ಉಳಿದಿರುವ ಅನುದಾನ ವಸೂಲಾತಿ/ಕಡಿತ | ಜಿಲ್ಲೆಗಳಿಗೆ ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ | ಕಾಲಂ 8ರ ಪೈಕಿ | |
|---|---|---|---|---|---|---|---|---|---|---|
| | | | | | | | | | ಜಾನುವಾರುಗಳ ನಿಗೂಢ ಕಾಯಿಲೆ ಯೋಜನೆಗೆ ಬಿಡುಗಡೆ ಯಾಗಿರುವ ಅನುದಾನ | ಸಾಂಬಾರು ಮಂಡಳಿಗೆ ಬಿಡುಗಡೆ ಯಾಗಿರುವ ಅನುದಾನ |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಬೆಳಗಾಂ | 413 | 299.00 | 331.370 | 67.275 | 8.874 | 0.000 | 67.275 | 1.375 | 0.000 |
| 2 | ಚಾಮರಾಜನಗರ | 456 | 59.00 | 66.370 | 13.275 | 2.530 | 2.530 | 10.745 | 0.000 | 0.000 |
| 3 | ಚಿಕ್ಕಮಗಳೂರು | 408 | 299.00 | 332.970 | 67.275 | 111.420 | 50.000 | 17.275 | 1.375 | 1.100 |
| 4 | ದಕ್ಷಿಣ ಕನ್ನಡ | 409 | 180.00 | 243.840 | 40.500 | 0.588 | 0.588 | 39.912 | 0.000 | 0.000 |
| 5 | ಧಾರವಾಡ | 415 | 59.00 | 66.370 | 13.275 | 12.488 | 0.000 | 13.275 | 0.000 | 0.000 |
| 6 | ಹಾಸನ | 410 | 243.00 | 311.470 | 54.675 | 27.862 | 27.862 | 26.813 | 1.375 | 0.850 |
| 7 | ಕೊಡಗು | 411 | 180.00 | 300.350 | 40.500 | 35.540 | 5.540 | 34.960 | 0.000 | 0.850 |
| 8 | ಮೈಸೂರು | 407 | 59.00 | 66.380 | 13.275 | 18.182 | 0.000 | 13.275 | 0.000 | 0.000 |
| 9 | ಶಿವಮೊಗ್ಗ | 405 | 299.00 | 366.380 | 67.275 | 19.976 | 19.976 | 47.299 | 1.375 | 1.100 |
| 10 | ಉಡುಪಿ | 457 | 180.00 | 205.010 | 40.500 | 25.990 | 25.990 | 14.510 | 0.000 | 0.000 |
| 11 | ಉತ್ತರ ಕನ್ನಡ | 416 | 539.00 | 549.644 | 121.275 | 37.670 | 33.084 | 88.191 | 2.000 | 1.100 |
| | **ಒಟ್ಟು:** | | **2396.00** | **2840.154** | **539.100** | **301.120** | **165.570** | **373.530** | **7.500** | **5.000** |
| 12 | ಪ.ಘ. ಅ.ಕಾ ಯೋಜನಾ ಕೋಶ | | 22.00 | 22.000 | 4.950 | 0.000 | 0.000 | 4.950 | 0.000 | 0.000 |
| | **ಜುಮ್ಲಾ** | | **2418.00** | **2862.154** | **544.050** | **301.120** | **165.570** | **378.480** | **7.500** | **5.000** |

**ಸಿ.ಎಂ.ಶಿರೋಳ್**
ನಿರ್ದೇಶಕರು,
ಯೋಜನೆ ಸಮನ್ವಯ ಹಾಗೂ ಮೌಲ್ಯಮಾಪನ ಘಟಕ
ಹಾಗೂ ಪದ ನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 359

**COMMERCE & INDUSTRIES SECRETARIAT**

**Subject :** Permission to M/s. Strides Arcolab Ltd, to establish a unit for manufacture of "Specialty Sterile Products" like soft gelatin capsules, tablets and injectables, in Bommasandra – Jigani Link Road Industrial Area, Bangalore.

**Read :**
1) G.O.No.CI 187 SPI 2005 dated 23.6.2006.
2) The letter dated 04.03.2008 from Head – Legal M/s. Strides Arcolab Ltd,
3) Proceedings of the 14th State High Level Clearance Committee [SHLCC] meeting held on 17.03.2008.

**Preamble:**

The proposal of M/s. Strides Arcolab Ltd, to establish a unit for manufacture of "Specialty Sterile Products" like soft gelatin capsules, tablets and injectables, with an investment of Rs.170.00 crores, in Bommasandra – Jigani Link Road Industrial Area, Bangalore, was approved in 3rd SHLCC meeting held on 3.3.2005 and the Committee decided to direct KIADB to allot 10 acres of land for the project in the above industrial area, subject to condition that the location confirms to the siting guidelines issued by the MOEF, GOI. Accordingly, Government Order at read (1) was issued.

Subsequently, the promoters vide their letter read at (2) have requested permission to transfer the lease hold rights for 15,550 sq. mtrs. (3 acres 34 guntas) of land, out of 10 acres allotted to them in the above plot, to M/s. Onco Therapist Ltd, a 100% wholly owned subsidiary. The said company proposes to setup a separate unit for manufacture of Oncology related products with focus on product development, thus, the promoters want to bifurcate the approved project into two and implement one through M/s. Strides Arcolab Ltd & other one through M/s.Onco Therapist Ltd.

The details of bifurcated projects are as follows;

| Sl. No. | Project Details | M/s. Strides Arco Lab Ltd, | M/s Onco Therapies Ltd. | Total |
|---|---|---|---|---|
| 1. | Proposed Activity/ Products | "Specialty Sterile Products" like soft gelatin capsules, tablets & injectables | Oncology related products | |
| 2. | Annual Production capacity (in Million units) | 150 | 240 | 390 |
| 3. | Proposed Investment (Rs. in crores) | 64.00 | 106.00 | 170.00 |
| 4. | Land in Acres | 6 A 6 G | 3 A 34 G | 10.00 A |
| 5. | Water required (in LPD) | 3,00,000 | 1,00,000 | 4,00,000 |
| 6. | Power required (in KVA) | 1640 | 1360 | 3000 |
| 7. | Employment opportunity | 33 | 87 | 120 |

The request of the company was discussed in the 14th SHLCC meeting held on 17.3.2008. The Committee noted the fact that, KIADB had already permitted the transfer of lease hold rights and approved the request of the company. Hence, the following order.

**GOVERNMENT ORDER NO. CI 121 SPI 2008, BANGALORE DATED: 07th May 2008**

In the circumstances explained in the preamble, in partial modification of G.O.No.CI 187 SPI 2005 dated 23.6.2006. Government is pleased to accord approval to the proposal of of M/s. Strides Arcolab Ltd, to bifurcate the project approved earlier in the 3rd SHLCC meeting held on 3.3.2005. M/s. Strides Arcolab is permitted to establish a unit for "Specialty Sterile Products like soft gelatin capsules, tablets & injectables" in 6 acres 6 guntas of land and M/s. Onco Therapist Ltd, is permitted to establish a unit for "Oncology related products" in 3 acres 34 guntas of land already allotted by KIADB.

The details of bifurcated projects are as follows;

| Sl. No. | Project Details | M/s. Strides Arco Lab Ltd, | M/s Onco Therapies Ltd. | Total |
|---|---|---|---|---|
| 1. | Proposed Activity/ Products | "Specialty Sterile Products" like soft gelatin capsules, tablets & injectables | Oncology related products | |
| 2. | Annual Production capacity (in Million units) | 150 | 240 | 390 |
| 3. | Proposed Investment (Rs. in crores) | 64.00 | 106.00 | 170.00 |
| 4. | Land in Acres | 6 A 6 G | 3 A 34 G | 10.00 A |
| 5. | Water required (in LPD) | 3,00,000 | 1,00,000 | 4,00,000 |
| 6. | Power required (in KVA) | 1640 | 1360 | 3000 |
| 7. | Employment opportunity | 33 | 87 | 120 |

All other conditions in Government Order No. CI 187 SPI 2005 dated 23.06.2006 applies to both the companies.

By Order and in the name of the President of India,

P.R. 780

**B.R. NAGABHUSHANA**
Desk Officer (Technical Cell)
Commerce & Industries Department

**Sub :** Proposal of M/s Karnataka Power Corporation Ltd., for establishment of " 2 x 500 MW Coal Based Thermal Power Station" at Raichur Growth Centre, Raichur District.

**Read:** Proceedings of the 10th State High Level Clearance Committee [SHLCC] meeting held on 28.8.2007.

**Preamble:**

Proposal of M/s Karnataka Power Corporation Ltd., for establishment of " 2 x 500 MW Coal Based Thermal Power Station" in 1000 acres of land in Raichur Growth Centre, Raichur District, with an investment of Rs.4160 crores. The project proposed to provide employment to about 6737 persons. The Company had requested for approval of the project and sanction of various Infrastructure facilities as well as incentives and concessions.

The State High Level Clearance Committee, [SHLCC] after detailed discussion of the project proposal of the said Company, approved the proposal of M/s Karnataka Power Corporation Ltd., and recommended to grant Infrastructure facilities and to extend incentives & concessions. Hence the following order.

**GOVERNMENT ORDER NO: CI 32 SPI 2008, BANGALORE DATED: 15th March 2008**

In the circumstances explained above, Government is pleased to approval project Proposal of M/s Karnataka Power Corporation Ltd., for establishment of " 2 x 500 MW Coal Based Thermal Power Station" in 1000 acres of land in Raichur Growth Centre, Raichur District, with an investment of Rs.4160 crores. and extend the following infrastructure facilities, incentives and concessions.

**INFRASTRUCTRE FACILITIES:**

**Land:** The Committee resolved to recommend to KIADB to allot 1000 acres, in Raichur Growth Centre, Raichur District.

**Water:** 5 MLD from Krishna Rivder as already allocated by Water Resources Department vide G.O.NO.WRD 28 WBM 2006 Dated 18.2.2007. The Company shall adopt rain water harvesting and water recycling.

**Incentivies and Concessions:** As per New Industrial Policy 2006-2011

**Environment:** The promoters were advised to obtain CFE from KSPCB & ECC from No civil works shall commence prior to obtaining ECC.

**Others:**

- The promoter shall take all statutory and other necessary clearances and shall submit milestones/progress in implementation of the project regularly, which will be monitored buy the Departments concerned.

This approval is valid for a period of two years from the date of issue.

By Order and in the name of the President of India,

P.R.630

**K.R. CHANDRAMMA**
Desk Officer (Technical Cell)
Commerce & Industries Department

**Sub :** Proposal of M/s Chincholi Sugar Mills Ltd., to Establish 2500 TCD Sugar Plant (Expandable to 3500 TCD) along with 26 MW Co-generation Plant, in Chincholi Village, Chincholi Taluk, Gulbarga District.

**Read:** Proceedings of the 10th State High Level Clearance Committee [SHLCC] meeting held on 28.8.2007.

**Preamble:**

Proposal of M/s Chincholi Sugar Mills Ltd., to Establish 2500 TCD Sugar Plant (Expandable to 3500 TCD) along with 26 MW Co-generation Plant, 216 acres of land already acquired and allotted by KIADB at Chincholi Village,Daultapura Villages, Chincholi Taluk, Gulbarga District, with an investment of Rs.97.85 crores. The project proposed to provide employment to about 242 persons. The Company had requested approval of the project for sanction of various Infrastructure facilities as well as incentives and concessions.

The State High Level Clearance Committee, [SHLCC] after detailed discussion of the project proposal of the said Company, approved the proposal of M/s Chincholi Sugar Mills Ltd.,, and recommended to grant Infrastructure facilities and to extend incentives & concessions. Hence the following order.

**GOVERNMENT ORDER NO: CI 26 SPI 2008, BANGALORE DATED: 15th March 2008**

In the circumstances explained above, Government is pleased to of Proposal of M/s Chincholi Sugar Mills Ltd., to Establish 2500 TCD Sugar Plant (Expandable to 3500 TCD) along with 26 MW Co-generation Plant, 216 acres of land already acquired and allotted by KIADB at Chincholi Village,Daultapura Villages, Chincholi Taluk, Gulbarga District, with an investment of Rs.97.85 crores. The project proposed to provide employment to about 242 persons.and extend the following infrastructure facilities, incentives and concessions.

**INFRASTRUCTRE FACILITIES:**

**Land:** The Committee resolved to permit the Company to establish the project in 216 acres of land already acquired and allotted by KIADB at Chincholi Village,Daultapura Villages, Chincholi Taluk, Gulbarga District.

**Power:** To be met out of own generation.

**Water**: 30 lakh Lpd of water to be ;met out from Mullamari River, which is already allocated by Water Resources Department vide letter No.WRD/60/MTZ/1998 dated 18.11.2002. The Company shall adopt rain water harvesting and water recycling.

**Incentivies and Concessions:** As per New Industrial Policy 2006-2011

**Environment:** The promoters were advised to obtain CFE from KSPCB & ECC from MOEF, GOI.

**Employment:** The Company shall prepare a plan for development of human resource required for the project, train local people and provide employment to these trained local youth and comply with Government policy of Employment to local people. A copy of human resource development plan shall be sent to the Commissioner for I.D. & Director of Industries and Commerce for monitoring.

**Vendor Development:** Where ever there is scope for vendor development for the project, the Company shall prepare a vendor development plan develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

